**BOOSK APPROVED BY THE**

***Director of Public Instruction***

***Mysore Bangalore***

**T B C. No 39 of 31-32. Dated 4th Sept. 1931.**

# ಮಕ್ಕಳ ಪುಸ್ತಕದ

| | | |
|---|---|---|
| ೧ನೆಯ ಕಟ್ಟು | | ೩-೮-೦ |
| ೨ | ,, | ೩-೮-೦ |
| ೩ | ,, | ೩-೮-೦ |
| ೪ | ,, | ೩-೮-೦ |

**T. B C. 39 Dated 14-2-1933**

| | | |
|---|---|---|
| ೫ | ಸೆಕಂಡರಿ ಎಡಿರ್ಷ | ೫-೮-೦ |
| ೬ | ,, ಭಾಗ | ೩-೦-೦ |

(ಭಾಗ ೨ ಸಿದ್ಧವಾಗಿರುತ್ತೆ ಬೆಲೆ ೩-೦-೦)

ಎಲ್ಲಾ ಪುಸ್ತಕಗಳನ್ನು ಒಟ್ಟಿಗೆ ತರಿಸಿ
ಕೊಳ್ಳುವವರಿಗೆ ರಿಯಾಯಿತಿ ಉಂಟು

ಮಕ್ಕಳ ಪುಸ್ತಕ ಕಾರ್ಯಾಲಯ

ಬೆಂಗಳೂರು ನಗರ

# ನಮ್ಮ ಮಾತು



ಈ ವಿಶೇಷ ಸಂಚಿಕೆಯು ಐದನೆಯದು.

ಈ ಸಂಚಿಕೆಯಲ್ಲಿ ದೇವುಡು ಅವರ ಕಥೆಗಳೂ ಹೊಯಿಸಳರ ಕವನಗಳೂ ಇವೆ. ಇವರಿಗೆ ನಮ್ಮ ಅನಂತ ವಂದನೆಗಳು.

ಈ ಸಂಚಿಕೆಯು ಸಾವಕಾಶವಾಗಿ ಪ್ರಕಟವಾದುದಕ್ಕೆ ಕ್ಷಮಾಪಣೆಯನ್ನು ಬೇಡುತ್ತೇವೆ. ಆದರೆ ಸಂಚಿಕೆಯ ವಿಶೇಷ ಅಂದ ಚಂದಗಳು ಈ ಸಾವಕಾಶಕ್ಕೆ ಕಾರಣಗಳು.

ಈ ವಿಶೇಷ ಸಂಚಿಕೆಗಳನ್ನು ಪ್ರಕಟಿಸುವುದರಲ್ಲಿ ಸಹಾಯಕರಾಗಿರುವ ಪೋಷಕರಾದ ೧೦ ರೂಪಾಯಿಗಳ ಚಂದಾದಾರರಿಗೆ ವಿಶೇಷ ವಂದನೆಗಳನ್ನು ಅರ್ಪಿಸುತ್ತೇವೆ.

ತಾ|| ೧-೯ ೩೩
ಬೆಂಗಳೂರು ಸಿಟಿ

ಸಂಪಾದಕ
ಮಕ್ಕಳ ಪುಸ್ತಕ

# ಮಗುವಿನ ಕೂಗು

ಹೈ ಯೆಂಬೋದೂ ಕುದುರೇ ಕಂಡು

ಕೊ ಯೆಂಬೋದೂ ಕುನ್ನಿಯ ಕಂಡು

ಮ್ಯಾ ವೆಂಬೋದೂ ಸೀಬಿಯ ಕಂಡು

ತಾ ಯೆಂಬೋದೂ ತಿಂಡೀ ಕಂಡು

ಪಿ ಯೆಂಬೋದೂ ಸಿಟ್ಟಿನ ಕೂಗು

ಊ ಯೆಂಬೋದೂ ಅಳು ಬಂದಾಗ

ಆ ಯೆಂಬೋದೂ ತಾಂಬೂಲಕ್ಕೆ

ಸಾ ಯೆಂಬೋದೂ ಸಂಗೀತಕ್ಕೆ

ಇವು ಕೇಳೆಲ್ಲವು
ಮಗುವಿನ
ಕೂಗು

# ಬುದ್ಧಿಯು ಕಥೆಗಳು.

## ೧. ತಿಮ್ಮ

ಬೆಂಗಳೂರಿನಲ್ಲಿ ಒಂದು ಮಾವಿನ ತೋಪು. ಆ ತೋಪಿನಲ್ಲಿ ಒಂದು ಹಿಂಡು ಕಪಿಗಳು ಇದ್ದವು. ಅವು ತಮ್ಮ ಮರಿಗಳನ್ನೆಲ್ಲಾ ಕಟ್ಟಿಕೊಂಡು ದಿನವೂ ತಿಂಡಿಗಾಗಿ ಬೀದಿ ಬೀದಿ ಅಲೆಯುತ್ತಿದ್ದುವು. ತಾಯಿತಂದೆ ಕಪಿಗಳು, ಮರಿಗಳನ್ನು ಕರೆದು " ಜೋಕೆ ! ಹಿಂಡು ಬಿಟ್ಟು ಹೋದೀರಿ !" ಎಂದು ಆಗಾಗ ಹೇಳುತ್ತಿದ್ದುವು.

ಆ ಹಿಂಡಿನಲ್ಲಿ ತಿಮ್ಮ ಎಂಬ ಒಂದು ಮರಿ ಇತ್ತು. ಅದು ಒಂದು ದಿನ " ಯಾವಾಗಲೂ ಇವರ ಜೊತೆಯಲ್ಲಿಯೇ ಏಕೆ ಹೋಗಬೇಕು? ಇಂದು ನಾನೇ ಬೇರೆ ಹೋಗುತ್ತೇನೆ " ಎಂದುಕೊಂಡಿತು. ಅಂದು ಹಾಗೆಯೇ, ಅವರೆಲ್ಲರೂ ಹೋಗುತ್ತಿದ್ದ ದಾರಿಯನ್ನು ಬಿಟ್ಟು, ಮತ್ತೊಂದು ಹಾದಿಯನ್ನು ಹಿಡಿಯಿತು. ಎಂದಿನಂತೆ ಮರಿಗಳೆಲ್ಲ ಜತೆಯಲ್ಲಿ ಬರುತ್ತಿವೆ ಎಂದು ದೊಡ್ಡ ಕಪಿಗಳೂ ಮುಂದು ಮುಂದಕ್ಕೆ ಹೋದುವು. ತಿಮ್ಮನು ಹಿಂದೆ ಉಳಿದುದು ಯಾರಿಗೂ ತಿಳಿಯದು.

ತಿಮ್ಮನು ಕೊಂಚದೂರ ಹೋಗುವುದರೊಳಗಾಗಿ, ಒಂದು ನಾಯಿ ಬಂತು; ತಿಮ್ಮನನ್ನು ಕಂಡು ಬೊಗಳಿತು. ಅದನ್ನು ಕಂಡು ಕೆಲವರು ತುಂಟ ಹುಡುಗರು ಬಂದರು. ತಿಮ್ಮನನ್ನು ಬೇಕಾದಷ್ಟು ಕೀಟಲೆ ಮಾಡಿದರು. ಕೆಲವರು ಮುಖವನ್ನು ಉದ್ದಮಾಡಿ, "ಗುರ್ ಗುರ್" ಎಂದು ಅಣಕಿಸಿದರು. ಮತ್ತೆ ಕೆಲವರು ಕೈಚಪ್ಪಾಳೆಯಿಟ್ಟು "ಕೋತೀ ತಿಮ್ಮಾ! ಲೇ! ಕೋತೀ ತಿಮ್ಮಾ!" ಎಂದು ಅದನ್ನು ರೇಗಿಸಿದರು. ಇನ್ನು ಕೆಲವರು ಕಲ್ಲಿನಿಂದ ಹೊಡೆದರು. ಇದನ್ನೆಲ್ಲಾ ಕಂಡು ತಿಮ್ಮನಿಗೆ ಬಲು ದಿಗಿಲಾಯಿತು. ಅರಿಚಿಕೊಂಡಿತು; ಅಲ್ಲಿಂದ ತಪ್ಪಿಸಿಕೊಂಡು ಹೋಗುವುದು ಹೇಗೋ ತಿಳಿಯದೆ, ಸುಮ್ಮನೆ "ಕಿಚಿಕಿಚಿ" ಎಂದು ಒರಲಿಕೊಂಡಿತು.

ಅಷ್ಟರಲ್ಲಿ ಅದರ ಅರಚಾಟವು ದೊಡ್ಡ ಕಪಿಗಳಿಗೆ ಕೇಳಿಸಿತು. ಕೂಡಲೇ ಹಿಂಡಿಗೆ ಹಿಂಡೇ ತಿಮ್ಮನಿರುವ ತಾವಿಗೆ ಓಡಿಬಂದವು. ಅವು ಬರುತ್ತಲೇ ಹುಡುಗರೂ ಓಡಿಹೋದರು. ನಾಯಿಯೂ ಓಡಿಹೋಯಿತು.

ಆಗ ಅದಕ್ಕೆ ಬುದ್ಧಿ ಬಂತು. ತಿಮ್ಮನು ಅಲ್ಲಿಂದ ಮುಂದೆ ಎಂದೂ ಅವಿಧೇಯನಾಗಿ ನಡೆಯಲಿಲ್ಲ. ಹಿಂಡಿನಲ್ಲಿ ಯಾರಾದರೂ ತಾಯಿತಂದೆಗಳು ಹೇಳಿದ ಮಾತು ಕೇಳದೆ ಹೋದರೆ, ತಿಮ್ಮನು ಅವರಿಗೆ ತನ್ನ ಕಥೆಯನ್ನು ಹೇಳಿ ದಾರಿಗೆ ತರುತ್ತಿತ್ತು.

# ನಾಯಿ



ಕಯ್, ಕುಯ್, ಗರ್, ಗುರ್.
॥ ರಗಳ್. ಬೊಗಳ್ ॥
ಕಯ್, ಕುಯ್, ಗರ್, ಗುರ್.

ಪೇಟೆ ಗೀಟೆ ಸುತ್ತುವೆ. ಗಲ್ಲಿ ಗಿಲ್ಲಿ ನುಗ್ಗುವೆ
ಆಟ ಗೀಟ ವಾಡಿ ಸುತ್ತಿ.
ಕಾಟ ಕೊಟ್ಟು ಓಡುವೆ
ತೊಟ್ಟೆ ಗಿಟ್ಟೆಯರುಡಿಸಿ ಎಂಜಲೆಲ್ಲ ಮೆಲ್ಲುವೆ
ಹೊಟ್ಟೆಗಿಲ್ಲ ದಾಗ ನಾನು
ಮನೆಯ ನುಗ್ಗಿ ನೋಡುವೆ
ಹುಂಜ ಹೆಂಟೆ ಹಾರಿಸಿ ಗೊಂದಲಿಕ್ಕಿ ಕಾಡುವೆ.
ಅಂಜುಬುರುಕ ಡುರ್ ಮಿಯಾ
ವೆಲ್ಲ ಅಟ್ಟಿಸಾಡುವೆ

ಕೈಯ್ಯ ರೊಟ್ಟಿ ಕಂಡರೆ.
ಒಯ್ಯನೆಯ್ದಿ ನಿಲ್ಲುವೆ
ಮೈಯ್ಯಿ ಬಾಲ ವಾಡಿ ಸಾಡಿ.
ಎಲ್ಲರನ್ನು ಗೆಲ್ಲುವೆ
ಸುರುಳು ಕಿವಿಯ ಜಾತಿನಾ
ಯದೆನಿಸಿ ಕೊಂಡೆ ವೊದಲಿಗೆ
ಕೊರಳ ಪಟ್ಟಿ ಬಂದ ಮೇಲೆ
ಕಿವಿಯು ನೆಟ್ಟು ನಿಂತಿದೆ
ಚಿಕ್ಕ ಪುಟ್ಟ ಮಕ್ಕಳ ಒಕ್ಕಲಾಗಿ ನಿಲ್ಲುವೆ
ನೆಕ್ಕಿ ಅವರ ಕೈಯ್ಯಿ ಕೆನ್ನೆ ಚೊಕ್ಕ
ಬೆಳ್ಳಿಯಾಗುವೆ

ಕಯ್. ಕುಯ್. ಗುರ್.

॥ ರಗಳ್. ಬೊಗಳ್ ॥

# ೨. ಬಾಳೆಯೂ ಸುಗಂಧರಾಜನೂ.

ಮುತ್ತುಗದ ಮರವು ಮರಗಳಿಗೆಲ್ಲಾ ಗುರುವಂತೆ. ಮರಗಳೆಲ್ಲಾ ಅದರ ಬಳಿಗೆ ಓದು ಕಲಿಯಲು ಹೋಗುತ್ತಿದ್ದುವಂತೆ. ಅದು ಹಣ್ಣಿನ ಗಿಡಗಳಿಗೇ ಒಂದು ತರಗತಿ, ಹೂವಿನ ಗಿಡಗಳಿಗೇ ಒಂದು ತರಗತಿ ಎಂದು ಬೇರೆ ಬೇರೆ ಮಾಡಿದ್ದಿತಂತೆ. ಅಂತೂ ಪಾಠಗಳೇನೋ ಕ್ರಮವಾಗಿ ನಡೆಯುತ್ತಿದ್ದುವು. ಹುಡುಗರು ಗುರುಗಳು ಹೇಳಿದಂತೆ ಕೇಳಿಕೊಂಡು ವಿದ್ಯೆ ಕಲಿಯುತ್ತಿದ್ದರು.

ಹಣ್ಣಿನ ಗಿಡಗಳಲ್ಲಿ ಬಾಳೆಯೂ, ಹೂವಿನ ಗಿಡಗಳಲ್ಲಿ ಸುಗಂಧರಾಜನೂ ಇಬ್ಬರೂ ಗೆಳೆಯರಾದುವು. ಅವರಿಬ್ಬರಿಗೂ ಕೊಂಚ ಜಂಭ. "ಮುತ್ತುಗದ ಎಲೆಗಿಂತ ನನ್ನ ಎಲೆ ದೊಡ್ಡದು ; ಅಲ್ಲದೆ ಜನರು ಮುತ್ತುಗದ ಎಲೆಗಿಂತ ನನ್ನ ಎಲೆಗೆ ಬೆಲೆಯನ್ನು ಕೊಡುವರು" ಎಂದು ಬಾಳೆಗೆ ಜಂಭ. "ಮುತ್ತುಗದ ಹೂ ಎಷ್ಟು ಅಂದವಾಗಿದ್ದರೇನು? ವಾಸನೆಯೇ ಇಲ್ಲ, ನನ್ನ ಹೂವಿನ ಮುಂದೆ ಹೂವೇ?" ಎಂದು ಸುಗಂಧರಾಜನಿಗೆ ಜಂಭ. ಈ ಜಂಭವು ಬಲಿಯಿತು. ಬಾಳೆಯೂ ಸುಗಂಧರಾಜನೂ ಬರುಬರುತ್ತ ಅವಿಧೇಯರಾದರು. ಅವು ಗುರುಗಳು ಹೇಳಿದ ಮಾತನ್ನು ಕೇಳದೆ ಹೋದುವು.

ಮುತ್ತುಗವೂ ಇದನ್ನು ಕಂಡು, ಅವರಿಬ್ಬರನ್ನೂ ಕರೆದು "ನೀವು ಹೀಗೆ ಮಾಡಬಾರದು. ಹೇಳಿದ ಮಾತು ಕೇಳದಿದ್ದರೆ ನಿಮಗೇ ನಷ್ಟ" ಎಂದು ಹೇಳಿತು. ಅವು ಕೇಳಲಿಲ್ಲ. ಆಗ ತರಗತಿಯಲ್ಲಿ "ಕವಲು ಬಿಡುವುದು" ಎಂಬ ಪಾಠವು ಆಗುತ್ತಿತ್ತು. ಅವಿಧೇಯರಾದ ಬಾಳೆ, ಸುಗಂಧರಾಜಗಳು ಪಾಠವನ್ನು ಗಮನಿಸಲಿಲ್ಲ.

ಕೆಲವು ದಿನವಾಯಿತು. ಮಲ್ಲಿಗೆ, ಜಾಜಿ, ಸಂಪಿಗೆ, ಪಾದರಿ, ಸುರಗಿ, ಪಗಡೆ, ಮೊದಲಾದ ಹೂವಿನ ಗಿಡಗಳೂ, ಮಾವು, ಬೇಲ, ಸೇಬು, ದ್ರಾಕ್ಷಿ, ಕಿತ್ತಳೆ, ಮೊದಲಾದ ಹಣ್ಣಿನ ಗಿಡಗಳೂ ಕವಲೊಡೆದುವು. ಏನೇನು ಮಾಡಿದರೂ ಬಾಳೆಯೂ ಸುಗಂಧರಾಜನೂ ಕವಲು ಬಿಡಲಾಗಲಿಲ್ಲ. ಅವುಗಳಿಗೆ ಬಹಳ ದುಃಖವಾಯಿತು. "ಗುರುವು ಹೇಳಿದ ಮಾತು ಕೇಳಲಿಲ್ಲವಲ್ಲ! ಕೆಟ್ಟೆವಲ್ಲಾ!" ಎಂದು ಬಹಳ ನೊಂದುಕೊಂಡುವು. ಈಗಲೂ ನೀವೂ ಬಾಳೆಯನ್ನೂ ಸುಗಂಧರಾಜನನ್ನೂ ನೋಡಿ. ಹಣ್ಣು ಹೂವು ಆದಮೇಲೆ ಮಿಕ್ಕ ಗಿಡಗಳು, ಕವಲೊಡೆದು ಸಂತೋಷದಿಂದ ಬೆಳೆಯುತ್ತಿದ್ದರೆ, ಅವೆರಡೂ ದುಃಖದಿಂದ ಬಾಡಿ ಬಳಲಿ ಒಣಗಿ ಹೋಗುವುವು.

# ಗಜ್ಜುಗದಾಟ

ಬೆಂಗಳೂರು ಬೆಂಗ್ಳೂರು ಬೆಂಗಳೂರು,
ಚಿಕ್ಕಪೇಟೆ ಒಂದು, ದೊಡ್ಡಪೇಟೆ ಎರಡು;
ಬಳೆಪೇಟೆ ಮೂರು, ನಗರ್ತಪೇಟೆ ನಾಕು.
ಬಳೆಬಳೇಪೇಟೆ, ಅಲ್ಲೆ ಅರಳೆಪೇಟೆ,
ಚಿಕ್ಕಪೇಟೆಗಡ್ಡ,
ದೊಡ್ಡಪೇಟೆ ನೋಡು.
ಬಳೆಬಳೆಪೇಟೆ, ಬಾಳಜರಿಪೇಟೆ,
ಬಾಳಬರೋರ್ಕ್ಕೂಟ; ಕುರ್ಚಿಮೇಜು ವಂದು
ದೋಸೆಜೊತೆ ಎರಡು, ಕಾಫಿಪ್ಯಾಲಮೂರು,
ಕೈಗೆ ಕಾಗದ ನಾಕು, ಎಲೆಸುತ್ತು ಐದು
ಲೆಖ್ಖದಪಟ್ಟಿ ಆರು, ದಖ್ಖಲಪಟ್ಟಿ ಏಳು
ಬುದ್ಧಿಬಂತು,
ಕಷ್ಟಸಂತು.
ಬಿಂಗಳೂರು ಬೆಂಗ್ಳುರು ಬೆಂಗಾಳೂರು,
ಅಜ್ಜಿಬಜ್ಜಿವಂದು ವೀರಬಲ್ಲ ಎರಡು,

ಬೆಂಗಾಳ್ಳೂರು ಕೆಂಪೇಗೌಡನಾಲ್ಕು,
ಕಿಲ್ಲೇದಾರಐದು ಭಲ್ಲೆದಾರಆರು,
ಆಲಿಹೈದ್ರಏಳು,
ಗೂಳಿಬಸವ,
ಗಾವೀಪೂರ.
ನಗರ್ತಪೇಟೆಗೆ ಹೋಗೋರ್ಬಾಳ.
ನಗನಾಣ್ಯ ನೊಡೋರ್ರ್ಬಾಳ
ನಗುವಿನ ಕಟ್ಟಿಗೆ ಸಿಕ್ಕೋರ್ರ್ಬಾಳ
ಹನ್ನೆರಡು ಹೊಡೀತು,
ಚರಂಡಿಲಿ ಉಡ್ತು
ಚಾವಡೀ ಕಂಡ್ತು,
ಲೇವಡಿಗಾಯ್ತು.
ರೊಕ್ಕ ಕಳಕೊಂಡ್ಯಾ ದುಃಖಕೊಂಡುಕೊಂಡ್ಯ,
ಮಾನಕಳಕೊಂಡ್ಯ ಏನಮಾಡ್ಲಂದ್ಯ
ಕಷ್ಟಸಂತು,
ಇಷ್ಟಸಂತು
ಬುದ್ಧಿಬಂತು.

## ೩. ಸೋಮೇಗೌಡ.



ಕತ್ತಲಾಗಿತ್ತು. ದನಕರುಗಳನ್ನು ಅಟ್ಟಿಕೊಂಡು ಆರಂಬಗಾರರೆಲ್ಲರೂ ಹೊಲ ಗದ್ದೆಗಳಿಂದ ಆಗತಾನೇ ಹಿಂದಿರುಗಿ ಬರುತ್ತಿದ್ದರು. ಪಟೇಲ ಸೋಮೇಗೌಡನು ಮಳೆಬೆಳೆ ವಿಚಾರವಾಗಿ ಮಾತನಾಡುತ್ತ ಚಾವಡಿಯಲ್ಲಿ ಕುಳಿತ್ತಿದ್ದನು. ಆಗ ಯಾರೋ ಕುದುರೆಯ ಮೇಲೆ ಕುಳಿತವರು "ಈ ಊರಿನ ಪಟೇಲನು ಯಾರು?" ಎಂದು ವಿಚಾರಿಸಿಕೊಂಡು ಬಂದರು. "ಅಯ್ಯಾ! ನಾನೊಬ್ಬ ದಾರಿಗನು. ಹಾದಿ ತಪ್ಪಿ ಬಂದಿರುವೆನು. ಈ ರಾತ್ರಿ ತಂಗುವುದಕ್ಕೆ ನನಗೆ ಕೊಂಚ ತಾವನ್ನು ಕೊಡಬೇಕು" ಎಂದರು. ಗೌಡನು "ಅದಕ್ಕೇನಪ್ಪ! ಬಾ!" ಎಂದು ಮನೆಗೆ ಕರೆದು ಕೊಂಡು ಹೋದನು.

ಮನೆಯೊಳಗೆ ದೀಪದ ಬೆಳಕಿಗೆ ಹೋಗುತ್ತಲೇ ಬಂದಿರುವವರು ಯಾರು ಎಂಬುದು ಗೌಡನಿಗೆ ತಿಳಿಯಿತು. ಅವನು ಕೂಡಲೆ ಕಾಲಿಗೆ ಬಿದ್ದು "ನನ್ನ ಮನೆ ದೇವರು!" ಎಂದು ಉಬ್ಬಿಹೋದನು; ಅವರ ಕಾಲಿಗೆ ಬಿಸಿನೀರು ಎರೆದನು. ಹಾಲು ಹಣ್ಣು ತಂದೊಪ್ಪಿಸಿದನು. ಬೆಚ್ಚಗೆ

ಇರುವೆಡೆಯಲ್ಲಿ ಹಾಸಿ ಮಲಗಿಸಿದನು. ಮನೆಯ ಮಂದಿ ಮಕ್ಕಳೆಲ್ಲರೂ ಬಂದು ಉಪಚರಿಸಿದರು. ಗೌಡನು ಕುದುರೆಗೆ ಚನ್ನಾಗಿ ಮೈತಿಕ್ಕಿಸಿ, ಬೇಯಿಸಿದ ಹುರುಳಿಯನ್ನು ಇಟ್ಟು, ಹೊಸಹುಲ್ಲನ್ನು ಹಾಕಿ ಆದರಿಸಿದನು. ಬಂದಿದ್ದವರು ಮಹಾರಾಜರು.

ಬೆಳಗಾಗುವ ವೇಳೆಗೆ ದಂಡು ದಾಳಿಯುವರೆಲ್ಲರೂ ದೊರೆಗಳನ್ನು ಹುಡುಕಿಕೊಂಡು ಬಂದು ಗೌಡನ ಮನೆಯ ಬಾಗಿಲಲ್ಲಿ ನಿಂತಿದ್ದರು. ದೊರೆಗಳು ಎದ್ದು ಈಚೆಗೆ ಬರುತ್ತಲೆ ಎಲ್ಲರೂ ಒಬ್ಬೊಬ್ಬರಾಗಿ ಬಂದು ಕಾಣಿಸಿಕೊಂಡು ಕೈಮುಗಿದರು.

ದೊರೆಗಳು ಗೌಡನನ್ನು ಹತ್ತಿರಕ್ಕೆ ಕರೆದು, "ಗೌಡ! ನೀನು ನಮಗೆ ಬಲು ಉಪಕಾರ ಮಾಡಿದೆ" ಎಂದು ಬಹಳವಾಗಿ ಹೊಗಳಿದರು. ಗೌಡನು "ಬಿಡು ನಮ್ಮಪ್ಪ! ನೀನು ನಮಗೆಲ್ಲ ಹೆತ್ತತಾಯಿಗಿಂತ ಹೆಚ್ಚು. ಸಮಯ ಬಂದರೆ ಪ್ರಾಣ ಕೂಡಾ ನಿನ್ನ ಪಾದಕ್ಕೆ ಒಪ್ಪಿಸಬೇಡವೇ? ಅಂಥಾದ್ದರಲ್ಲಿ ಇದೇನು ಹೆಚ್ಚು?" ಎಂದನು. ದೊರೆಗಳು ಅವನ ರಾಜಭಕ್ತಿಗೆ ಮೆಚ್ಚಿ ಆ ಹಳ್ಳಿಯನ್ನೇ ಅವನಿಗೆ ಮಾನ್ಯವಾಗಿ ಕೊಟ್ಟರು.

---

# ಬುದ್ಧಿವಂತ

ಧನಿಧನಿ ಭೇದಿಸಿ ಪೇಳುವನವ್ವ
ಮಣಿಬಂಧ
ಫಣಿಬಂಧ
ಬಾಗಿಲಲೆಂಬ
ಹಣಕುತ ನಿಂತಿದ್ದು ಓಡು ಓಡೆನುವ
ಅಮ್ಮ
ಕೇಳಮ್ಮ
ಈ ಬೊಂಬೆಯ ಆಣೆಗು
ತಮ್ಮನು
ಎನಗಿಂತ ಬಲುಬುದ್ಧಿವಂತ
ಪ್ಯಾಲದಹಾಲೆಲ್ಲ ಚೆಲ್ಲಿದನವ್ವ
ಬಾಳ ಕೇಳೋ ಇದು ಸಾಗರವೆಂದ
ಪ್ಯಾಲವ ಕೌಚಿಟ್ಟು ಲಂಕೆಯಿದೆಂದ

ಬಾಳ

ಬಾರೋ

ಬಿಗಿ ನಡುವನು ಎಂದ

ನಾಳೆಯೆ

ತರುವೆನು

ಸೀತೆಯನೆಂದ

ಅಮ್ಮ

ಕೇಳಮ್ಮ

ತಮ್ಮನು ಎನಗಿಂತ

ಈ ಬೊಂಬೆಯ ಆಣೆಗು

ಬಲುಬುದ್ಧಿವಂತ

---

# ೪. ಕರ್ಣ.



ದ್ರೋಣಾಚಾರ್ಯರು ಕೌರವ ಪಾಂಡವರಿಗೆ ಬಿಲ್ಲಿನ ವಿದ್ಯೆಯನ್ನು ಕಲಿಸುತ್ತಿದ್ದರು. ಕರ್ಣನು ಬಂದು ತನಗೂ ಕಲಿಸಬೇಕೆಂದು ಕೇಳಿಕೊಂಡನು. ಅವರು "ನೀನು ಕ್ಷತ್ರಿಯನಲ್ಲ. ನಾನು ನಿನಗೆ ವಿದ್ಯೆಯನ್ನು ಹೇಳಿ ಕೊಡುವುದಿಲ್ಲ" ಎಂದರು. ಕರ್ಣನು "ಬೇರೆ ಕಡೆಯಲ್ಲಿ ಕಲಿತು ಬರುವೆನು" ಎಂದು ಆಣೆಯಿಟ್ಟುಕೊಂಡನು.

ಆಗಿನ ಕಾಲದಲ್ಲಿ ಪರಶುರಾಮರನ್ನು ಬಿಟ್ಟರೆ. ದ್ರೋಣಾಚಾರ್ಯರನ್ನು ಮೀರಿಸಿದವರು ಯಾರೂ ಇರಲಿಲ್ಲ. ಅದರಿಂದ ಕರ್ಣನು ಅವರ ಬಳಿಗೇ ಹೋದನು. ಅವರು ಬ್ರಾಹ್ಮಣರಲ್ಲದವರಿಗೆ ವಿದ್ಯೆಯನ್ನು ಹೇಳುತ್ತಿರಲಿಲ್ಲ. ಕರ್ಣನು "ನಾನೂ ಬ್ರಾಹ್ಮಣನು" ಎಂದು ಸಟೆಯಾಡಿದನು. ಅವರು ಅದು ದಿಟವೆಂದು ನಂಬಿ ಅವನನ್ನು ಶಿಷ್ಯನನ್ನಾಗಿ ಸೇರಿಸಿಕೊಂಡರು.

ಆದರೆ ಈ ಕಪಟವು ಬಹಳ ಕಾಲದವರೆಗೆ ಹೊರಬೀಳಲಿಲ್ಲ. ಕರ್ಣನು ಬ್ರಾಹ್ಮಣನೆಂದೇ ಪರಶುರಾಮರು

" ಮಕ್ಕಳ ಪುಸ್ತಕ "



" ಭರತಾಗಮನ "

ಚಿತ್ರಕಾರರು :—ತಲಶೆಟ್ಟಿ ರಾಮರಾವ್‌ಗಾರು ಬಿ.ಎ., ಬಿ.ಎಲ್., ' ಭಾರತಿ 'ಯ ವಿಶ್ವಾಸದಿಂದ

Printed at Makkala Pustaka Press, Bangalore City

ವಿದ್ಯೆಯನ್ನೆಲ್ಲಾ ಹೇಳಿಕೊಟ್ಟರು. ಇನ್ನು ಕೆಲವು ದಿನವಾ ದರೆ ಎಲ್ಲವೂ ಮುಗಿದು ಕರ್ಣನು ಹಿಂತಿರುಗಬಹುದು. ಆಗ ಒಂದು ದಿನ ಅವನ ಗುಟ್ಟು ಹೊರಬಿತ್ತು. "ಕರ್ಣನು ಬ್ರಾಹ್ಮಣನಲ್ಲ" ಎಂಬುದು ಅವರಿಗೆ ತಿಳಿದುಹೋಯಿತು. ಸಟೆಯಾಡಿ ಮೋಸ ಮಾಡಿದನೆಂದು ಅವರಿಗೆ ಬಹಳ ಸಿಟ್ಟು ಬಂತು. "ಸುಳ್ಳು ಹೇಳಿ ಮೋಸದಿಂದ ಈ ವಿದ್ಯೆ ಯನ್ನು ಸಂಪಾದಿಸಿದೆ. ಇನು ನಿನಗೆ ಸಮಯದಲ್ಲಿ ಫಲಿ ಸದೆ ಹೋಗಲಿ" ಎಂದು ಹೇಳಿಬಿಟ್ಟರು.

ಅದರಂತೆಯೇ ಕರ್ಣನು ಯುದ್ಧಕ್ಕೆ ಹೋದಾಗ ಲೆಲ್ಲಾ ಅವನಿಗೆ ಬಾಣ ವಿದ್ಯೆಯು ಮರೆತು ಹೋಗುತ್ತಿತ್ತು. ಅದರಿಂದಲೇ ಅವನಿಗೆ ಸಾವೂ ಬಂದಿತು.

# ಹುಡುಗರು

ಜಗುಲಿಯ ಕೆಳಗಡೆ ನಿಲ್ಲಲಿ ಬೇಡ
। ಮುಗಮುಘವೆನುತಿದೆ ತುರುಬಿನ ಹೂವು ।
ತಡೆದು ಬಾರೋ ಗುಂಡೋಪಂತ
। ಕಡೆಗೆ ತಾರೋ ಗುಂಡು ಗೋಲಿ ।
ಕಡೆಮನೆ ಹುಡುಗನೆ ನಡೆಯಲೆ ಓಡೋ
। ಬಡಿಕೆಯ ತಂದಳು ಗೌರಿಯ ತಾಯಿ ।
ಢೀಂ ಢಾಂ ಢೀಂ ಢಾಂ ಢೀಂ
ಬೇಲಿಯ ಬುಡದಲಿ ಮುಳ್ಳಿದೆ ಭಾಳ
। ಕಾಲಿಡಲಾಚೆಗೆ ಕೆಸರಿದೆ ಕಾಳ ।
ಗೆದ್ದಲು ಹಿಡಿದಿದೆ ಯಾಕಡೆ ಬೊಂಬು
। ಬಿದ್ದಿಹ ಜಲ್ಲೆಯ ನೆಳೆಯೆಲೋ ಶಂಭು ।
ಕಂಡರೆ ಕಾಣದ ಹಾಗಿರಬೇಕು

। ತಿಂಡಿಯ ಒಡಲನು ತುಂಬಲು ಬೇಕು ।

ಢೀಂ ಢಾಂ ಢೀಂ ಢಾಂ ಢೀಂ

ಬಲುಬಲು ಹುಳ್ಳಗೆ ಬೇಲದಕಾಯಿ

। ಕೆಣಕಲು ಬ್ಯಾಡಿರಿ ಬಾಗಿಲ ನಾಯ ।

ಮೆಣಸಿನ ಪುಡಿಯನು

ಆಸೆಯೊಳು ತುರುಕು

। ನಿಲುಕದು ನಮಗದು ಮಾವಿನ ಕಾಯಿ ।

ಮನೆಯುವರೆಲ್ಲರು ಬರುವರು ಇನ್ನು

। ಹನುಮನ ಕಟ್ಟೆಗೆ ಹೊರಡಿರಿ ಮುನ್ನ ।

ಢೀಂ ಢಾಂ ಢೀಂ ಢಾಂ ಢೀಂ

ಗುಡಿಯೊಳು ಗಡಿಬಿಡಿ

ಮೃಡನ ಪೂಜೆಯು ಮಾಡುವಾಗ

ಢೀಂ ಢಾಂ ಢೀಂ ಢಾಂ ಢೀಂ



# ೫. ಗರುಡನೂ ಗೂಬೆಯೂ.

ಒಬ್ಬ ರಾಜನನ್ನು ಆರಿಸಿಕೊಳ್ಳಬೇಕೆಂದು ಹಕ್ಕಿಗಳೆಲ್ಲವೂ ಸಭೆ ಸೇರಿದುವು. ಗೂಬೆಯು ಅವರಿವರಿಗೆ ಲಂಚ ಕೊಟ್ಟು, "ನನ್ನನ್ನು ದೊರೆಯನ್ನು ಮಾಡಿರಿ" ಎಂದು ಹೇಳಿಕೊಂಡಿತು. ಲಂಚವನ್ನು ತೆಗೆದುಕೊಂಡಿದ್ದ ಹಕ್ಕಿಗಳೆಲ್ಲವೂ "ನಮಗೆ ಗೂಬೆಯೇ ಅರಸಾಗಬೇಕು" ಎಂದುವು.

ಇದೆಲ್ಲಾ ನಡೆಯುವವರೆಗೂ ಕಾಗೆಯು ಒಂದು ಮೂಲೆಯಲ್ಲಿ ಕುಳಿತಿತ್ತು. "ಕೊಳಕನಾದ ಗೂಬೆಯು ದೊರೆಯಾಗುವುದೆಂದರೇನು ?" ಎಂದು ಎಲ್ಲರಿಗೂ ಅಸಹ್ಯವಾಗಿತ್ತು. ಆದರೂ ಮಾತನಾಡದೆ ಎಲ್ಲರೂ ಸುಮ್ಮನಿದ್ದರು. ಆಗ ಕಾಗೆಯು ಎದ್ದು ನಿಂತುಕೊಂಡು "ಸ್ವಾಮಿ ! ಕೊಂಚ ತಡೆಯಿರಿ. ಗೂಬೆಯನ್ನು ಎಲ್ಲರೂ ಕೊಂಚ ಕಣ್ಣಿಟ್ಟು ನೋಡಿರಿ. ಜಗತ್ತಿನಲ್ಲಿ ಇಂತಹ ಕೊಳಕು ಹಕ್ಕಿಯು ಇನ್ನು ಉಂಟೆ? ಮುಖವನ್ನು ತೊಳೆದು ಎಷ್ಟು ದಿವಸವಾಯಿತೋ ? ಮೈಯನ್ನು ತೊಳೆದುದಂತೂ

ಉಂಟೋ ಇಲ್ಲವೇ ಇಲ್ಲವೋ? ಆ ಕಣ್ಣುಗಳನ್ನು ನೋಡಿ. ಜಿಬರು ಗುಡ್ಡೆ ಗುಡ್ಡೆಯಾಗಿದೆ. ಮೂಗು ನೋಡಿ. ಸಿಂಬಳವು ಹರಿಯುತ್ತಿದೆ. ಇಂತಹ ಶೊಬಚನನ್ನು ಅರಸಾಗಿ ಮಾಡಿಕೊಂಡರೆ ಎಲ್ಲರೂ ನಗುವರು. ಅತ್ತ ನೋಡಿ. ಶುಚಿವಂತನಾದ ಗರುಡನು ಕುಳಿತಿರುವನು. ಯಾವಾಗ ನೋಡಿದರೂ ಮಡಿಯಾಗಿಯೇ ಇರುವನು. ಆತನನ್ನು ನೋಡಿದರೆ ಎಷ್ಟು ಸಂತೋಷವಾಗುವುದು! ಆತನ ಶುಚಿಯನ್ನು ನೋಡಿಯೇ ಭಗವಂತನಾದ ವಿಷ್ಣುವೂ ಆತನನ್ನು ಮೆಚ್ಚಿಕೊಂಡಿರುವನು. ಆತನನ್ನೇ ದೊರೆಯನ್ನು ಮಾಡಬೇಕು. ಈ ಕೊಳಕನನ್ನು ಹೊರಕ್ಕೆ ನೂಕಬೇಕು" ಎಂದಿತು. ಉಳಿದ ಹಕ್ಕಿಗಳೂ "ಹೌದು. ಗೂಬೆಯನ್ನು ನೂಕಿ. ಗರುಡನಿಗೇ ಪಟ್ಟಕಟ್ಟಿರಿ" ಎಂದವು. ಎಲ್ಲರೂ ಸೇರಿ ಹಾಗೆಯೇ ಮಾಡಿದರು. ಅರಸುತನವು ಗೂಬೆಗೆ ತಪ್ಪಿ ಗರುಡನಿಗೇ ಆಯಿತು.

"ತನ್ನ ಕೊಳಕುತನದಿಂದ ದೊರೆತನವನ್ನು ತಪ್ಪಿಸಿಕೊಂಡನು" ಎಂದು ಎಲ್ಲರೂ ಹಾಸ್ಯ ಮಾಡುವರು ಎಂದೋ ಏನೋ, ಗೂಬೆಯು ಈಗಲೂ ಹಗಲಿನಲ್ಲಿ ಹೊರಗೆ ಬರುವುದಿಲ್ಲ.

# ಪ್ರತುಮೆ

ಸಕ್ಕರೆ ಖಜ್ಜುರ ದ್ರಾಕ್ಷಿ ಪುಟಾಣಿ
ಮಿಕ್ಕಿಹ ಸಿಹಿಸುಖದಿನಿಸೆಲ್ಲವೆಲ್ಲ
ಸೊಕ್ಕಿದ ಸಿಂಗಿಯ ಹಾಲೊಳು ಕಲಸಿ
ಅಕ್ಕರ ಮಕ್ಕಳ ಮಿದ್ದು ಮಾಡುವರ್ಕೈ
ಪ್ರತುಮೆಯ ಮಾಡುತ
ಮಧುತರ ದಿನಿಸಲಿ
ಅತಿಶಯಮೂರ್ತಿಯ
ಮಗುವೆಂಬರ್ಕೈಯ್ಯ
ಆನೆಯ ದಂತವು ಪಸಿಮೆಯ ಹೊನ್ನು
ಮಾಣಿಕ ಮುತ್ತು ವೈಢೂರ್ಯವು ನೀಲ
ಜಾಣರು ತೇದಿವ ತಿಂಗಳ ಬೆಳಕಲಿ
ಬಾನದ ಹತ್ತಿಯೊಳದ್ದಿ ತಿದ್ದುವರು
ಪ್ರತುಮೆಯ ಮಾಡುತ
ಮಧುತರ ದಿನಿಸಲಿ
ಅತಿಶಯ ಮೂರ್ತಿಯ
ಮಗುವೆಂಬರ್ಕೈಯ್ಯ

## ೬. ಸುಬ್ಬೂ--ಶಿವೂ.



ಸುಬ್ಬು:-ಶಿವೂ ! ಇತ್ತಲಾಗಿ ಬಾ. ಅಲ್ಲಿ ಒಂದು ಕರು ನಿಂತಿದೆ. ಹಾದೀತು.

ಶಿವು:-ಅದು ಹಾಯುವುದಿಲ್ಲ. ನಮ್ಮ ಮನೆಯಲ್ಲಿ ಹುಟ್ಟಿದ ಕರು.

ಸುಬ್ಬು:-ಇದೇನೋ ಹೀಗೆನ್ನುವೆ? ಮನೆಯಲ್ಲಿ ಹುಟ್ಟಿದ ಮಾತ್ರಕ್ಕೆ ಹಾಯುವುದಿಲ್ಲವೆ?

ಶಿವು:-ಅದು ನನ್ನ ಸ್ನೇಹಿತ, ಸುಬ್ಬೂ! ನನ್ನನ್ನು ಹಾಯುವುದಿಲ್ಲ.

ಸುಬ್ಬು:-'ಕರು ಸ್ನೇಹಿತ' ಎಂದರೇನಯ್ಯ?

ಶಿವು:-ಇಲ್ಲ, ಸುಬ್ಬೂ! ಅದಕ್ಕೆ ನನ್ನನ್ನು ಕಂಡರೆ ಬಲು ಇಷ್ಟ. ನಾನು ಕರೆದ ಕಡೆಯೆಲ್ಲಾ ಬರುತ್ತದೆ. ತಾಯಿಯ ಬಳಿ ಹಾಲು ಕುಡಿಯುತ್ತಿದ್ದರೂ ನಾನು ಕೂಗಿದರೆ ಬಂದು ಬಿಡುವುದು.

ಸುಬ್ಬು:-ಏನೋಪ್ಪ! ನನಗೆ ನಂಬುಗೆಯಿಲ್ಲ. ಹಾಲಿನ ಮಾದಮ್ಮನ ಮನೆಯಲ್ಲಿ ಒಂದು ಕರು ಇದೆ. ಅದರ ವಿಚಿತ್ರ ಏನು ಹೇಳಲಿ? ಯಾರಾದರೂ ಹತ್ತಿರ ಕುಳಿತುಕೊಂಡರೆ ಅವರ ಬಟ್ಟೆಯನ್ನೇ ಮೇದು ಬಿಡುತ್ತದೆ. ಅದನ್ನೇನಾದರೂ ಹುಷ್

ಎಂದರೆ ಹಗ್ಗ ಕಿತ್ತುಕೊಂಡು ಹಾಯುವುದಕ್ಕೆ ಓಡಿಸಿಕೊಂಡು ಬರುತ್ತದೆ. ಇಂಥಾದುದರಲ್ಲಿ ನೀನು ಹೇಗಯ್ಯಾ ? 'ಇದು ನನ್ನ ಸ್ನೇಹಿತ' ಎಂದರೆ ನಂಬುವುದು.

ಶಿವು:-ಅದೆಲ್ಲ ಸಾಕುವುದರಲ್ಲಿ ಇದೆಯಯ್ಯಾ ! ಅವರ ಮನೆಯಲ್ಲಿ ಅದಕ್ಕೆ ಹೊಟ್ಟೆಗೆ ಸರಿಯಾಗಿ ಹಾಕು ವುದಿಲ್ಲವೋ ಏನೋ ? ಅಲ್ಲದೆ ದನ ಮೊದಲಾದ ಪ್ರಾಣಿಗಳಿಗೆ ಹೊಟ್ಟೆಗೆ ಹಾಕಿದರೆ ಮಾತ್ರ ಸಾಲದು. ಅದರ ಜತೆಗೆ ನಮ್ಮ ದಯೆಯೂ ಅವುಗಳ ಮೇಲೆ ಇರಬೇಕು. ಆಗ ಅವುಗಳು ನಮ್ಮಲ್ಲಿಯೂ ಪ್ರೀತಿ ಯಿಡುವುವು. ಈಗ ನೋಡು. ಈ ಕರುವಿಗೆ ನನ್ನಲ್ಲಿ ಎಷ್ಟು ಸ್ನೇಹವಿದೆ ! ನಾನು ಹೋದ ಹೋದ ಕಡೆ ತಾನೂ ಬರುವುದಿರಲಿ. ಇದು ನಿತ್ಯವೂ ನನ್ನ ಹಾಸಿಗೆಯಲ್ಲಿಯೇ ಮಲಗುವುದು. ಒಂದು ದಿನ ವಾದರೂ ಹಾಸಿಗೆಯಲ್ಲಿ ಸಗಣಿ ಹಾಕಿಲ್ಲ. ಗಂಜಲ ವನ್ನು ಹುಯ್ದಿಲ್ಲ. ಒಂದು ದಿನವೂ ನನ್ನನ್ನು ತುಳಿ ದಿಲ್ಲ. ನಾನು ಹೊರಗೆ ಹೋಗಿ ಬಂದರೆ ನನ್ನ ಮೂತಿಯಲ್ಲಿ ಮೂತಿಯಿಟ್ಟು ನನ್ನನ್ನು ಎಷ್ಟು ಪ್ರೀತಿ ಯಿಂದ ನೆಕ್ಕುವುದು ಬಲ್ಲೆಯಾ ?

ಸುಬ್ಬು:-ಇದಿಷ್ಟೂ ಯೇತರಿಂದ ಆಗುವುದಯ್ಯ ?

ಶಿವೂ:-ನಾನು ಮೊದಲೇ ಹೇಳಲಿಲ್ಲವೆ? ಸುಬ್ಬೂ! ಪ್ರಾಣಿ
ಗಳಿಗೂ ನಮ್ಮ ಹಾಗೆಯೇ 'ಬೇಕು ಬೇಡ'ಗಳು
ಉಂಟು. ನಾವು ಹೇಳಿಕೊಳ್ಳಬಲ್ಲೆವು. ಅವು
ಹೇಳಿಕೊಳ್ಳಲಾರವು. ನಾವು ಅವುಗಳಲ್ಲಿ ಮಮತೆ
ಯಿಟ್ಟು, ನಮ್ಮ ಮಕ್ಕಳಂತೆ ಬೆಳೆಸಿದರೆ ಅವೂ
ನಮ್ಮಲ್ಲಿ ಪ್ರೀತಿಯಿಟ್ಟು ನಡೆದು ಕೊಳ್ಳುವುವು.
ಈಗ ಈ ಕರುವನ್ನೂ ನೋಡು, ಮಾದಮ್ಮನ ಮನೆ
ಯ ಕರುವನ್ನೂ ನೋಡು. ಅದನ್ನು ನೋಡಿದರೆ
ಎಷ್ಟು ಅಸಹ್ಯವಾಗುತ್ತದೆ? ಇದನ್ನು ನೋಡಿದರೆ
ಎಷ್ಟು ಸಂತೋಷವಾಗುತ್ತದೆ? ಅಲ್ಲದೆ ಇದು ನನ್ನ
ಹಿಂದೆ ಹಿಂದೆ ಬರುತ್ತಿದ್ದರೆ ನನಗೆಷ್ಟು ಸಂತೋಷ
ಬಲ್ಲೆಯಾ? ಇನ್ನೂ ಒಂದು ವಿಚಿತ್ರ ನೋಡು. ಈಗ
ನನ್ನನ್ನು ಹೊಡೆಯುವುದಕ್ಕೆ ಬಾ. ನೋಡಿದೆಯಾ?
ನೀನು ನನ್ನನ್ನು ಹೊಡೆಯಲು ಬಂದರೆ ಅದು ಹೇಗೆ
ನಿನ್ನ ಮೇಲೆ ಬೀಳಲು ಬರುತ್ತದೆ? ಇದು ನನ್ನ
ಆಪ್ತನಲ್ಲವೆ?

ಸುಬ್ಬೂ:-ಪ್ರಾಣಿಗಳೂ ಹೀಗೆ ಗೆಳೆತನವನ್ನು ಬೆಳೆಸಬಲ್ಲ
ವೆಂದು ನನಗೆ ತಿಳಿದಿರಲಿಲ್ಲ. ಶಿವೂ! ಇನ್ನು ಮೇಲೆ
ನಾನೂ ಆವುಗಳ ಗೆಳೆತನವನ್ನು ಸಂಪಾದಿಸುವೆನು.

# ಆಚಾರ್ರ ತಟ್ಟು



ಆಚಾರ್ತಟ್ಟು ಆಚಾರ್ತಟ್ಟು
ಹೈ ಹೈ ಹೈ! ಹೀ ಹೀ ಹೀ!

ಆಚಾರ್ತಟ್ಟನು ಕಟ್ಟಲ್ಯಾತರಲ್ಲಿ
ಆಚಾರ್ಜನಿವಾರ ಜನಿವಾರದಲ್ಲಿ
ಹೈ ಹೈ ಹೈ! ಹೀ ಹೀ ಹೀ!

ಆಚಾರ್ತಟ್ಟಿಗೆ ಹೊಟ್ಟೆಗೇನು ಏನು?
ಆಚಾರ್ತಟ್ಟಿಗೆ ಕೊಡು ಕರಿತುಳಸಿ
ಹೈ ಹೈ ಹೈ! ಹೀ ಹೀ ಹೀ!

ಆಚಾರ್ರೋಡಲು ನಡೆಯಿತು ಪೈಗು
ಆಚಾರ್ನಿಂತರೆ ಕುಂತಿತು ಪೈಗು
ಹೈ ಹೈ ಹೈ! ಹೀ ಹೀ ಹೀ!

ಅರಳಿಟ್ಟು ಅವಲಕ್ಕಿ ಕೊಬ್ಬರಿ ಬೆಲ್ಲ
ಪರಿಪರಿ ತಿಂಡಿಯ ತುಂಬಿದರೈಯ್ಯ
ಹೈ ಹೈ ಹೈ! ಹೀ ಹೀ ಹೀ!

ನಡಿನಡಿ ಹಳ್ಳಿಗೆ ಪಡಿಗೆಯ ತರುವ
ನಡಿನಡಿ ಕದರೇ ಸದರದ ಕುದುರೆ
ಹೈ ಹೈ ಹೈ ಹೀ ಹೀ ಹೀ !

ಆಚಾರ್ರೆಳೆಯಲು ತಿರುಗಿತು ಕದರು
ಆಚಾರ್ರೋಡಿಸೆ ನಡೆಯಿತು ಕುದುರೆ
ಹೈ ಹೈ ಹೈ ! ಹೀ ಹೀ ಹೀ !

ಹಾದಿಯ ಉದ್ದಕು ! ಸೇದಿದರ್ರೈಯ !
ಆಚಾರ್ಸೇದಲು ಐದಿತು ಕದರು
ಹೈ ಹೈ ಹೈ ! ಹೀ ಹೀ ಹೀ !

ಆಚಾರ್ನಿಂತರೆ ಕುಂತಿತು ಕುದುರೆ
ಆಚಾರ್ರೇದಲು ಬೆವರಿತು ಕುದುರೆ
ಹೈ ಹೈ ಹೈ ! ಹೀ ಹೀ ಹೀ !

ಮನುಷನಂತೆ ಮನಸು ಮನದಂತೆ ಕುದುರೆ !
ಎನುತಾರ್ರಾಚಾರ್
ಭಪ್ಪರೆ ಪೈಗು
ಹೈ ಹೈ ಹೈ ! ಹೀ ಹೀ ಹೀ !
ಆಚಾರ್ತಟ್ಟು ಆಚಾರ್ತಟ್ಟೊ
ಹೈ ಹೈ ಹೈ ! ಹೀ ಹೀ ಹೀ !

## ೭. ಪುಟ್ಟೊ



ಮೈಸೂರಿನಲ್ಲಿ ನವರಾತ್ರಿ ಬಂತು. ಶಾಲೆಗಳನ್ನೆಲ್ಲಾ ಮುಚ್ಚಿದರು. ಮುಚ್ಚುವ ದಿವಸ ಉಪಾಧ್ಯಾಯರುಬಂದು "ನಾಡಿದ್ದು ಶ್ರೀ ಮನ್ಮಹಾ ರಾ ಜ ರು ಒಂಭತ್ತು ಘಂಟೆಗೆ ಸರಿಯಾಗಿ ಸಿಂಹಾಸನದ ಮೇಲೆ ಕುಳಿತು ಕೊಳ್ಳುವರು. ಆ ವೇಳೆಯಲ್ಲಿ ನಾವೆಲ್ಲರೂ ಹೋಗಿ ಆ ಮಹೋತ್ಸವವನ್ನು ನೋಡಲಿ ಎಂದು ಅರಮನೆಯ ಮುಂದೆ ಮರದ ಮೆಟ್ಟಲು ಹಾಕಿಸಿರುವರು. ನಾವು ಅಲ್ಲಿ ಹೋಗಿ ಕುಳಿತುಕೊಳ್ಳಬೇಕಾದರೆ ಎಂಟಕ್ಕೆ ಸರಿಯಾಗಿ ಹೋಗಬೇಕು. ನೀವೆಲ್ಲರೂ ಸರಿಯಾಗಿ ಇಲ್ಲಿಗೆ ಏಳೂವರೆ ಘಂಟೆಗೆ ಬಂದು ಬಿಡಿ. ಹೊತ್ತಾಗಿ ಬಂದವರಿಗೆ ನೋಟವು ತಪ್ಪಿ ಹೋಗುವುದು" ಎಂದು ಹೇಳಿದರು.

ನವರಾತ್ರಿಯ ಪಾಡ್ಯದ ದಿನ ಎಲ್ಲರೂ ಸರಿಯಾಗಿ ಏಳೂವರೆಗೆ ಬಂದರು. ಪುಟ್ಟೊಗೆ ನೋಟವನ್ನು ನೋಡಲು ಹೋಗುವೆನೆಂಬ ಸಂತೋಷ. ಕಂಡಕಂಡವರಿಗೆಲ್ಲ "ಮಹಾರಾಜರು ಸಿಂಹಾಸನದ ಮೇಲೆ ಕುಳಿತುಕೊಳ್ಳುವುದನ್ನು ನೋಡಲು ನಾವೆಲ್ಲ ಹೋಗುತ್ತೇವೆ" ಎಂದು ಹೇಳಿಕೊಂಡು

ಹೊರಟನು. ಇವನು ಶಾಲೆಗೆ ಬರುವುದರೊಳಗೆ ಎಂಟು ಘಂಟೆ ಆಗಿಹೋಯಿತು. ಎಲ್ಲಾ ಹುಡುಗರನ್ನೂ ಕರೆದು ಕೊಂಡು ಉಪಾಧ್ಯಾಯರು ಹೊರಟು ಹೋಗಿದ್ದರು. ಪುಟ್ಟೂಗೆ ಬಹಳ ದುಃಖವಾಯಿತು. ಅರಮನೆಯ ಮುಂದಕ್ಕಾದರೂ ಹೋಗೋಣ ಎಂದುಕೊಂಡು ಆತುರ ದಿಂದ ಓಡಿಹೋದನು. ಅಲ್ಲಿಯೂ ಹೊತ್ತಾಗಿ ಹೋಗಿತ್ತು. ಉಪಾಧ್ಯಾಯರು ಎಲ್ಲರನ್ನೂ ಕರೆದುಕೊಂಡು ಹೋಗಿ ಮರದ ಮೆಟ್ಟಲಿನ ಮೇಲೆ ಕುಳಿತುಬಿಟ್ಟಿದ್ದರು. ಎಲ್ಲಿ ನೋಡಿದರೂ ಜನ. ಎತ್ತಲಾಗಿ ಹೋದರೂ ಪೋಲೀಸಿ ನವರು. ಇವನನ್ನು ಕೇಳುವವರೇ ಇಲ್ಲ. ಪುಟ್ಟೂ ಪೆಚ್ಚು ಮುಖ ಹಾಕಿಕೊಂಡು ಎಲ್ಲಿಯೋ ನಿಂತಿದ್ದು ಮನೆಗೆ ಹೋದನು.

ಆವೊತ್ತು ಪುಟ್ಟುವು ತಾನು ಪಟ್ಟ ದುಃಖವನ್ನು ಮರೆಯಲಿಲ್ಲ. ಅಂದಿನಿಂದ ಅವನು ಎಲ್ಲಿಗೆ ಹೋಗಬೇಕಾಗಿ ರಲಿ, ಹೊತ್ತಿಗೆ ಸರಿಯಾಗಿ ಹೋಗುವನು. ಶಾಲೆಗಂತೂ ಅವನು ಯಾವೊತ್ತೂ ಹೊತ್ತುಮೀರಿ ಹೋಗಲಿಲ್ಲ.

---

# ನಂಗೊತ್ತಿಲ್ಲ

ಮುಸಿಕುಡಿಕೆಯನೇ-ಉರುಟಿಟ್ಟು
ಹಸಿಕಾಗದದೋ-ಳೊತ್ತಿಟ್ಟು
ಹೊಸದೋ ತರದೋ-ಳ್ಕಟ್ಟಿಟ್ಟ
ಹಸುಗೂಸಾರ್ಕೆ-ಪೇಳುವೆಯಾ ?
ನಾಂ-ಗೋ-ತ್ತಿ-ಲ್ಲಾ-ಪ್ಪಾ

ಹಾರೊಡದಿಟ್ಟೋ-ಬಾಗಿಲನೆಲ್ಲ
ಊರಿನ ಎಳೆಗರು-ಗಳನೇ ಅಟ್ಟಿ
ಸೂರೆಗೊಂಡವ-ರಾರು ಮುಚ್ಚೋರೆ?
ನಾಂ-ಗೋ-ತ್ತಿ-ಲ್ಲಾ ಪ್ಪಾ

ಬಗ್ಗಿದ ಕಿವಿಯಾ-ಕುಸ್ನಿಯ ಮರಿಯಾ
ಒಗ್ಗೀ ತಂದಿಟ್ಟು-ಹಾಸಿಗೆಯೊಳಗೇ

ಮಗ್ಗುಲಲ್ಲಿದ್ದು–ಹಾಲನೆ ಹಾಕೀ
ಹಿಗ್ಗಿದರಾರ್ರೈ–ಪೇಳುವೆಯಾ ?
ನಾಂ-ಗೋ-ತ್ತಿ-ಲ್ಲಾ-ಪ್ಪಾ

ಯಾಕೆಲ್ಲ ನಗುತ್ತಿದ್ದು ಕಾಡಿ ಕಿಚ್ಚಾಡಿ
ಬೇಕಾಗಿ ಬೇಡಾಗಿ–ಕಣುಮುತ್ತನೊತ್ತಿ
ಸಾಕೆಂದು ನೂಕಲು–ನುಗ್ಗಿ ಮುತ್ತಿಟ್ಟ
ಚಿಕ್ಕವನಾರ್ರೈ-ಪೇಳುವೆಯಾ ?
ನಾಂ-ಗೋ-ತ್ತಿಲ್ಲಾ-ಪ್ಪಾ






ನವಿಲು

# ತಂದೆಯೂ ಮಕ್ಕಳೂ

ಆಶ್ರಮದಲ್ಲಿ ಅರಳಿಯ ಮರದ ಕೆಳಗೆ ಒಂದು ಜಿಂಕೆಯ ಚರ್ಮದ ಮೇಲೆ ವಿಶ್ವಾಮಿತ್ರರು ಕುಳಿತಿದ್ದರು. ಆಗ ಒಬ್ಬ ಹುಡುಗನು ಏದುತ್ತಾ ಓಡಿಬಂದು ಅವರ ಕಾಲಿಗೆ ಬಿದ್ದನು. ಅವರೂ "ಯಾರು? ಶುನಶ್ಶೇಫ ನೇನೋ? ಎಲಾ! ಕೊನೆಗೆ ಬದುಕಿಕೊಂಡೆಯಾ? ಭಲೆ! ಸಂತೋಷ! ಬಾ! ಕುಳಿತುಕೋ" ಎಂದರು. ಅವನೂ ಕೈ ಮುಗಿದು "ಗುರುಗಳೇ! ತಮ್ಮ ಕೃಪೆಯಿಂದ ನಾನು ಉಳಿದುಕೊಂಡೆನು. ಇನ್ನು ಮುಂದಕ್ಕೆ ತಾಯಿ, ತಂದೆ, ಬಂಧು, ಬಳಗಗಳೆಲ್ಲವೂ ತಾವೇ! ನಾನೂ ತಮ್ಮ ಮಕ್ಕಳಲ್ಲಿ ಒಬ್ಬನಾಗಿ ಸೇವೆ ಮಾಡಿಕೊಂಡು ಇರುತ್ತೇನೆ. ಅಪ್ಪಣೆಯಾಗಬೇಕು" ಎಂದು ಕೇಳಿಕೊಂಡನು. ಅವನ ಕಣ್ಣುಗಳಿಂದ ನೀರು ಹರಿಯುತ್ತ ಇತ್ತು. ಆದನ್ನು ನೋಡಿ ವಿಶ್ವಾಮಿತ್ರರಿಗೆ ಮನಸ್ಸು ಕರಗಿ ಹೋಯಿತು. "ಹೂ! ಹಾಗೆಯೇ ಆಗಲಿ ಇರು!" ಎಂದರು. ಅವನನ್ನು ಕೊಲ್ಲಬೇಕೆಂದು ಯಾರೋ ಹಿಡಿದುಕೊಂಡು ಹೋಗಿದ್ದರು. ವಿಶ್ವಾಮಿತ್ರರ ಕೃಪೆಯಿಂದ ಅವನು ಅವರ ಕೈಯಿಂದ ತಪ್ಪಿಸಿಕೊಂಡು ಬದುಕಿ ಬಂದಿದ್ದನು.

ಅವರಿಗೆ ಆವೇಳೆಗಾಗಲೇ ಆರು ಜನ ಮಕ್ಕಳಿದ್ದರು. ಮೊದಲ ಮೂವರು ಯಾವಾಗಲೂ ತಂದೆಯು ಹೇಳಿದು

ದಕ್ಕೆ ಪ್ರತಿಯನ್ನೇ ಹೇಳುವರು. ಕೊನೆಯ ಮೂವರು ತಂದೆಯ ಮಾತು ಎಂದರೆ, ಏನೇ ಆಗಲಿ ಎರಡು ಆಡುತ್ತಿರಲಿಲ್ಲ. ವಿಶ್ವಾಮಿತ್ರರು ಆರು ಜನರನ್ನೂ ಕರೆಸಿ "ಅಯ್ಯಾ! ಈ ಶುನಶ್ಶೇಫನು ಗುರುಹಿರಿಯರಲ್ಲಿ ಭಕ್ತಿಯುಳ್ಳವನು. ಇವನು ನಿಮ್ಮೆಲ್ಲರಿಗಿಂತಲೂ ವಿದ್ಯೆಯಲ್ಲಿಯೂ, ತಪಸ್ಸಿನಲ್ಲಿಯೂ ಹಿರಿಯನು. ಇವನೂ ನಿಮ್ಮಲ್ಲಿ ಒಬ್ಬನಾಗಿ ಇದ್ದುಕೊಂಡಿರಲಿ" ಎಂದು ಹೇಳಿದರು.

ಮೊದಲ ಮೂವರು ಎಂದಿನಂತೆ ಎದುರು ಆಡಿದರು. ವಿಶ್ವಾಮಿತ್ರರೂ ಒಂದು ಸಲ ಹೇಳಿದರು. ಎರಡು ಸಲ ಹೇಳಿದರು. ಮೂರನೆಯ ಸಲವೂ ಹೇಳಿದರು. ಅವರು ಕೇಳಲಿಲ್ಲ. "ನಿಮ್ಮ ಮನೆಯೇ ಬೇಡ" ಎಂದು ಎಲ್ಲಿಗೋ ಹೊರಟು ಹೋದರು.

ಕೊನೆಯ ಮೂವರು "ತಂದೆಯೇ! ನೀನೇ ನಮಗೆ ದೇವರು. ನೀನು ಹೇಳಿದುದೇ ನಮಗೆ ವೇದವಾಕ್ಯವು. ನಿನ್ನ ಇಷ್ಟದಂತೆಯೇ ಆಗಲಿ. ಶುನಶ್ಶೇಫನೇ ನಮಗೆಲ್ಲಾ ಹಿರಿಯವನಾಗಲಿ" ಎಂದು ಒಪ್ಪಿಕೊಂಡರು. ವಿಶ್ವಾಮಿತ್ರರಿಗೆ ಸಂತೋಷವಾಯಿತು. ಆ ನಾಲ್ವರಿಗೂ ಸಕಲ ವಿದ್ಯೆಗಳನ್ನೂ ಉಪದೇಶಿಸಿ, ಸಿದ್ಧಿಯಾಗುವಂತೆ ಅನುಗ್ರಹಿಸಿದರು.

# ಬೀಸಣಿಗೆ



ಬೀಸಣಿಗೇ
ಕೊಳ್ಳೀ
ಬೀಸಣಿಗೇ

ಚಳಿಚಳಿಯಾದರೆ ಬೀಸಣಿಗೆ
ಬಲು ಧಗೆಯಾದರೆ ಬೀಸಣಿಗೆ

ಹಲಸದ ಸೀರಲು ಬೀಸಣಿಗೆ
ಬಲುಬಗೆಕಾಯುವ ಬೀಸಣಿಗೆ ॥೧॥

ಆಸೆಯು ಸುಡುತಿದೆ ಕಾಯುತಿದೆ
ಮೋಕ್ಷವೃಕ್ಷೆಂಬಿವು ಬೇಯುತಿವೆ

ಮೋಸ ಕಿಚ್ಚೆಂಬಿವು ಹಾರುತಿವೆ
ದೇಶದೊಳಂತರ ದೇಶದೊಳು ॥೨॥

# ೯. ಹುಲಿಯೂ ಬೆಕ್ಕೂ.

ಹುಲಿಯು ಬೆಕ್ಕಿನ ಹತ್ತಿರ ವಿದ್ಯೆಯನ್ನು ಕಲಿಯುವುದಕ್ಕೆ ಹೋಯಿತು. ಬೆಕ್ಕು "ಅಯ್ಯಾ! ನಿನಗೆ ಸಿಟ್ಟು ಬಹಳ. ನೀನು ಆ ಸಿಟ್ಟು ಬಿಟ್ಟರೆ ಆಗಬಹುದು" ಎಂದಿತು. ಹುಲಿಯು "ಹಾಗೇ ಆಗಲಿ" ಎಂದು ಒಪ್ಪಿಕೊಂಡಿತು. ಬೆಕ್ಕು ಅಕ್ಕರೆಯಿಂದ ಕಲಿಸಲು ಮೊದಲು ಮಾಡಿತು.

ಆದರೆ ಬೆಕ್ಕಿಗೆ ಬಹಳ ಬುದ್ಧಿ. ತನಗಿಂತ ಗಾತ್ರದಲ್ಲಿ ದೊಡ್ಡದಾದ ಹುಲಿಯು ಮೇಲೆ ಬಿದ್ದರೆ ತಾನು ಉಳಿಯುವುದು ಅನುಮಾನವೆಂದು, ದೂರದಲ್ಲಿಯೇ ಇರುತ್ತಿತ್ತು. ಗುಟ್ಟರೆ ಹಾಕುವುದು, ಸದ್ದಾಗದಂತೆ ನಡೆಯುವುದು. ಪೊದೆಗಳಲ್ಲಿ ಅವಿತುಕೊಳ್ಳುವುದು, ಗುರಿಯಿಟ್ಟು ಹಾರುವುದು ಮೊದಲಾದ ವಿದ್ಯೆಗಳನ್ನು ಹೇಳಿಕೊಟ್ಟಿತು. ಹುಲಿಯು ಬಹಳ ವಿಧೇಯನಾಗಿ ಎಲ್ಲವನ್ನೂ ಕಲಿತುಕೊಂಡಿತು. ಅಲ್ಲಿಗೆ ಒಂದು ವರುಷವಾಯಿತು.

ಎರಡನೆಯ ವರುಷ ಕೊಂಚ ಕಷ್ಟದ ಪಾಠಗಳಿಗೆ ಅರಂಭವಾಯಿತು. ಕತ್ತಲಲ್ಲಿ ನೋಡುವುದು, ಹೊಂಚು ಹಾಕುವುದು, ಬಾಲವನ್ನು ನೆಲಕ್ಕಪ್ಪಳಿಸುವುದು, ಇವೆಲ್ಲವನ್ನೂ ಕಲಿತುಕೊಂಡಿತು.



ಹುಲಿಯೂ ಬೆಕ್ಕೂ

ಮೂರನೆಯ ವರುಷ ಇನ್ನೂ ಕಷ್ಟದ ಪಾಠಗಳು. ಆದರೆ ಅಲ್ಲಿ ಕಲಿಯುವುದು ಹೆಚ್ಚಾಗಿರಲಿಲ್ಲ. ಆ ವರ್ಷ, ಉಗುರುಗಳನ್ನು ಬೇಕಾದಾಗ ಈಚೆಗೆ ಬಿಡುವುದು, ಬೇಡವಾದಾಗ ಒಳಗೆ ಎಳೆದುಕೊಳ್ಳುವುದು, ಮರ ಹತ್ತುವುದು,

ಹೀಗೆ ಎರಡೇ ಕಲಿಯಬೇಕಾಗಿದ್ದುದು. ಹುಲಿಯು ಉಗು
ರನ್ನು ಬಿಟ್ಟು ಎಳೆದುಕೊಳ್ಳುವುದನ್ನು ಕಲಿತುಕೊಂಡಿತು.
ಬೆಕ್ಕು ಮರವನ್ನು ಹತ್ತುವುದನ್ನು ಹೇಳಿಕೊಡುತ್ತಿದೆ.
ಎಷ್ಟು ಸಲ ಹೇಳಿದರೂ ಹುಲಿಯು ಎಲ್ಲೋ ನೋಡಿ
ಕೊಂಡಿತ್ತು. ಅದಕ್ಕೆ ತಿಳಿಯಲಿಲ್ಲ. ಆದಕ್ಕಾಗಿ ಬೆಕ್ಕು
ಅದನ್ನು ಬೆತ್ತದಿಂದ ಹಾಗೆಂದಿತು. ಹುಲಿಯು ಸಿಡುಗಿ
ತಟ್ಟನೆ ಮೇಲೆ ಬಿತ್ತು. ಆದರೆ ಬೆಕ್ಕು ಬಹಳ ಎಚ್ಚರಿಕೆ
ಯಿಂದಿತ್ತು. ಹುಲಿಗೆ ಸಿಕ್ಕಲಿಲ್ಲ. ತಟ್ಟನೆ ಮರವನ್ನು
ಹತ್ತಿಕೊಂಡಿತು. ಹುಲಿಗೆ ಮರ ಹತ್ತಲು ಆಗಲಿಲ್ಲ. ಆಗ
ಅದಕ್ಕೆ "ನನಗೆ ಮರವನ್ನು ಹತ್ತುವುದು ಬರುವುದಿಲ್ಲ"
ಎಂಬುದು ನೆನಪಿಗೆ ಬಂತು.

ಬೆಕ್ಕು ಅವಿಧೇಯನಾದ ಹುಲಿಯನ್ನು ಮತ್ತೆ ನಂಬ
ಲಿಲ್ಲ. ತನ್ನ ಕೆಟ್ಟ ನಡತೆಗಾಗಿ ಹುಲಿಯು ಬಹಳ ನೊಂದು
ಕೊಂಡಿತು. ತಾನು ವಿಧೇಯನಾಗಿರುವೆನೆಂದು ಹೇಳಿ
ಕೊಂಡಿತು. ಬೆಕ್ಕು "ನೀನು ಅವಿಧೇಯ. ಹೇಳಿದ ಹಾಗೆ
ಕೇಳುವವನಲ್ಲ. ನಿನಗೆ ನಾನು ಪಾಠವನ್ನು ಹೇಳುವುದಿಲ್ಲ"
ಎಂದು ಹೇಳಿ ಬಿಟ್ಟಿತು. ಹುಲಿಯು ಅತ್ತು, ಕಣ್ಣೀರು
ಕರೆಯಿತು. ಆದರೂ ಬೆಕ್ಕು ಮರ ಹತ್ತುವುದನ್ನು ಅದಕ್ಕೆ
ಕಲಿಸಿ ಕೊಡಲಿಲ್ಲ. "ನನಗೆ ಮರ ಹತ್ತುವುದು ಬರು
ವುದಿಲ್ಲ" ಎಂದು ಹುಲಿಯು ಈಗಲೂ ಅಳುವುದಂತೆ.

# ಜಾಂಬುವಂತ

ಜೂಲು ಮಯ್ಯಿ ಜೂಲು
ಕಾಲು ಹ್ಯಾಟ ಗಾಲು
ಬಾಲ ಮೋಟ ಬಾಲ
ಬೆರಳೆಲ್ಲ ಕಂಚಿನ ಕೂರುಗುರು
|| ಬಲು ಕೂರುಗುರು || ೧

ಬಂದ ಜಾಂಬುವಂತ
ಬಂದ ಕುಣಿದು ನಿಂತ
ಬಂದ ದಣಿದು ನಿಂತ
ಮುಸುಮುಸು ಕುಯಿಕುಯಿಗುಟ್ಟುತಲಿ
|| ಗುರುಗುಟ್ಟುತಲಿ || ೨

ಮಿಗಿಲೆಲ್ಲ ನೀಟುಗಾರ
ಬಗಲಲ್ಲಿ ಮೋಟುಗೋಲು
ಚಿಗಿಯುತ್ತ ಬಂದ ನೋಡು
ಮಾವನ ಮನೆಗೆಂದು ಅಳಿಯಮಯ್ಯ
|| ತಾನಳಿಯಮಯ್ಯ || ೩

ಸುಗಿದೆದ್ದು ಸುತ್ತಿಸುಳಿದ
ಮೊಗದಲ್ಲಿ ವಾಟೆ ಕೊಳಲು
ಹೆಗಲಲ್ಲಿ ತಾಟಗೋಲು
ಗೋಹಿಂಡ ಕಾಯ್ವ ಗೋವಿಂದ
|| ಸಿರಿ ಗೋವಿಂದ || ೪

ಕೊರಳಿಗೊಂದು ಝುಣಕಾರ
ಕಾಲಿಗೊಂದು ಗಗ್ಗರ
ಮೂಗಿಗೊಂದು ಉಂಗುರ
ಆದು ಇದಕೊಂದ ಮಿಣಿಮಿಣಿಯು
|| ಹುರಿ ಮಿಣಿಮಿಣಿಯು || ೫

ಮೂಗುದಾರ ತುಯ್ಬರೆ
ಜಾಗಾಕಿ ಕುಣಿವೆ
ಬಾಗುತ್ತ ಮಣಿವೆ
ಯಾರಿಗಾತ ಋಣಿಯುವಿ ಜಾಂಬುವಂತ
|| ಓ ಜಾಂಬುವಂತ || ೬

ಏನು ತಿಂದಿ ಬೇಕೋ
ಜೇನು ತಿಂದ ಜಾಂಬು
ಏನು ತಿಂಬೆ ನೀನು
ಮಾನ ಹೋದ ಮೇಲಿನ್ನು ಒಡಲಿಲ್ಲಿ
|| ತಿಂಬ ಒಡಲಿಲ್ಲ || ೭

ತಿರಕಪ್ಪ ಹಿಡಿದ
ಹೊರಜಿಯ ಬಿಗಿದ
ಕರಡಪ್ಪ ದುಡಿದ
ಮುರುಡಪ್ಪ ನಲಿದ
ತಿರಿದನು ಹಿಟ್ಟು ರೊಟ್ಟಿ—ಮಡಿಲಲ್ಲಿ
|| ಮೊರಮೊರದಲ್ಲಿ || ೮

# ೧೦ ಕಾರುಗಳ್ಳಿ ವೀರರಾಜಯ್ಯ



ಹಿಂದೆ ಈ ನಮ್ಮ ಮೈಸೂರು ರಾಜ್ಯವನ್ನು ರಾಜವೊಡೆಯರು ಆಳುತ್ತಿದ್ದರು. ಆಗ ವೀರರಾಜಯ್ಯನೆಂಬುವನು ಒಬ್ಬನು ಇದ್ದನು. ಮಹಾರಾಜರು ಅವನು ಬದುಕಲೆಂದು ಕಾರುಗಳ್ಳಿಯನ್ನು ಅವನಿಗೆ ಮಾನ್ಯವಾಗಿ ಕೊಟ್ಟಿದ್ದರು.

ವೀರರಾಜಯ್ಯನು ಬಹಳ ಜಂಭಗಾರನು ಯಾರನ್ನು ಕಂಡರೂ ಲಕ್ಷ್ಯವಿರಲಿಲ್ಲ. ಒಂದು ದಿನ ಮಹಾರಾಜರ ಎದುರಿಗೆ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಅಟ್ಟಹಾಸದಿಂದ ಬಂದನು. ಮಹಾರಾಜರ ಮಗ್ಗುಲಲ್ಲಿ ಇದ್ದ ಇತರ ದೊಡ್ಡ ಅಧಿಕಾರಿಗಳಿಗೆ ಇದು ಸರಿ ಬೀಳಲಿಲ್ಲ. "ಮಹಾರಾಜರೆಂದರೆ ನಮಗೆಲ್ಲಾ ದೊಡ್ಡವರು. ಅವರ ಸನ್ನಿಧಿಯಲ್ಲಿ ನಯ ಭಯಗಳಿಂದ ನಡೆದುಕೊಳ್ಳಬೇಕು. ಇಲ್ಲವಾದರೆ ನಿನಗೆ ಒಳ್ಳೆಯದಾಗುವುದಿಲ್ಲ" ಎಂದು ಮಂತ್ರಿಯು ಹೇಳಿ ಕಳುಹಿಸಿದನು. ವೀರರಾಜಯ್ಯನು ಕೇಳಲಿಲ್ಲ.

ಮತ್ತೊಂದು ಸಲವೂ ಹೀಗೆಯೇ ಆಯಿತು. ಆ ಸಲವೂ ಮಂತ್ರಿಯು ಮತ್ತೆ ಬೇಡವೆಂದು ಹೇಳಿದನು. ಇನ್ನೊಂದು ಸಲವೂ ಹೀಗೆಯೇ ಆಯಿತು. ಮಂತ್ರಿಯು ಮಹಾರಾಜರ ಬಳಿಗೆ ಹೋಗಿ "ಮಹಾಸ್ವಾಮಿಯವರು ಮನ್ನಿಸಬೇಕು. ವೀರರಾಜಯ್ಯನು ಪ್ರಭುಗಳನ್ನು ಕಂಡರೆ ಅಲಕ್ಷ್ಯಮಾಡುತ್ತಿರುವನು. ಇತರರು ಇವನನ್ನು ನೋಡಿ ಕೆಟ್ಟುಹೋದಾರು. ಅದರಿಂದ ಅವನಿಗೆ ಶಿಕ್ಷೆಯಾಗಬೇಕು" ಎಂದು ಅರಿಕೆ ಮಾಡಿದನು. ಮಹಾರಾಜರು "ಅಹುದು, ಎರಡುಸಲ ಮನ್ನಿಸಿದರೂ ಅವನಿಗೆ ಬುದ್ಧಿ ಬರಲಿಲ್ಲ. ಅವನ ಮಾನ್ಯವನ್ನೂ ಪಲ್ಲಕ್ಕಿಯನ್ನೂ ಕಿತ್ತುಕೊಂಡು ಓಡಿಸಿಬಿಡಿ" ಎಂದು ಅಪ್ಪಣೆ ಮಾಡಿದರು. ಮಂತ್ರಿಯು ಹಾಗೆಯೇ ಮಾಡಿದನು.



# ಲಚ್ಚಿಯ ಹೈದ

ಬತ್ತಾಸ ಬುಟ್ಟಿಗೆ ಹಾರಿದ ಹೈದ
ಮತ್ತಾ ಬುಟ್ಟಿಯು ಬಲು ತುಂಬಿತ್ತು

ಗುಟುರುವ ಗೂಳಿಯಬಾಯಿಗೆ ಬಿದ್ದ
ಬಡಿವಾಗಗೂಳಿಯು ಬಲು ಕೆರಳಿತ್ತು

ಮುಂಡಾಸೊಳಗಡೆ ಹಾರಿದ ಹೈದ
ಮುಂಡಾಸದು ಬಲು ಮಣಕಾಗಿತ್ತು

ಮಣಕನಮುಂಡಾಸಿಂದಲಿ ಹೈದ
ಹೆಣಕಿದ ಜೇನಿನ ಗೂಡಿಗೆ ಹಾರಿ

ಗೂಡಿನ ಜೇನವು ಕಾಡಲು ಬಾಳ
ಗಾಡಿಯ ಒಳಗಡೆ ಘುಮುಕಿದ ಹೈದ

ಹೊಯ್ದರು ಅಲ್ಲಿಯ ಜನಗಳು ಅವನ
ಹೈಯ್ದನು ಬೋನಿನವಳಗಡೆ ಹೊಕ್ಕ

ಬೋನಿನವಳಗಡೆ ಪರಚಿತು ಕೋತಿ
ಬಾನಕೆ ನೆಗೆದನು ಬಚ್ಚಿಯ ಹೈದ

ಬಣವೆಯ ಮೇಲಕ್ಕೆ ಬಿದ್ದನು ಹೈದ
ಬಣವೆಯು ಹೊಗೆಯಿತು ಭುಗಭುಗಯೆಂದು

ಒಣಕಲು ಕೆಮ್ಮಲು ಕೆಮ್ಮಿದ ಹೈದ
ಕಣದೊಳಗೆಲ್ಲಾ ಹೊರಳಿದ ಹೈದ



# ನೇರಿಲು ಹಣ್ಣಿನ ಕಥೆ

ಪಾಂಡವರು ಹನ್ನೆರಡು ವರುಷ ಕಾಡಿನಲ್ಲಿ ವಾಸಮಾಡಿದರು. ಆಗ ಒಂದು ದಿನ ಭೀಮಸೇನನು, ಆನೆಯ ಗಾತ್ರವಿದ್ದ ಒಂದು ನೇರಿಲು ಹಣ್ಣನ್ನು ತಂದನು. ಧರ್ಮರಾಯನು ಅಷ್ಟು ದೊಡ್ಡ ಹಣ್ಣನ್ನು ಕಂಡು ಆಶ್ಚರ್ಯಪಟ್ಟು, "ಇದೇನು? ಇಷ್ಟು ದೊಡ್ಡದಾಗಿರುವುದಲ್ಲ!" ಎಂದು ಅಲ್ಲಿದ್ದ ಋಷಿಗಳನ್ನು ವಿಚಾರಿಸಿದನು. ಅವರು "ಅಯ್ಯಾ! ಇದು ಕಣ್ವಋಷಿಯ ಆಶ್ರಮದ ಹಣ್ಣು. ಅಲ್ಲಿ ವರ್ಷಕ್ಕೊಂದು ಸಲ ಇಂತಹುದೊಂದು ದೊಡ್ಡ ಹಣ್ಣಾಗುವುದು. ಆಗ ಋಷಿಯು ಕಣ್ಣು ಬಿಟ್ಟು ಕೈ ಚಾಚುವನು. ಹಣ್ಣು ಹೋಗಿ ಅವನ ಕೈಯಲ್ಲಿ ಕೂಡುವುದು. ಆತನು ಇದನ್ನು ತಿಂದು, ಮತ್ತೆ ತಪಸ್ಸಿಗೆ ಕುಳಿತುಕೊಳ್ಳುವನು" ಎಂದರು.

ಇದನ್ನು ಕೇಳಿ ಧರ್ಮರಾಯನಿಗೆ "ಭೀಮನು ಋಷಿಯ ಹಣ್ಣನ್ನು ತಂದುಬಿಟ್ಟನು. ಇನ್ನಾತನು ಕಣ್ಣು ತೆರೆವ ವೇಳೆಗೆ ಹಣ್ಣು ಇಲ್ಲದೆ ಇರಲು, ಆತನು ಎಷ್ಟು ನೊಂದುಕೊಳ್ಳುವನೋ! ಇನ್ನೇನು ಗತಿ?" ಎಂದು ದಿಗಿಲಾಯಿತು. ಕೂಡಲೇ ತನಗೆ ದಿಕ್ಕಾದ ಶ್ರೀಕೃಷ್ಣನನ್ನು ನೆನೆದನು. ಆತನೂ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಬಂದನು. ಕೂಡಲೇ ಧರ್ಮರಾಯನು "ಕೃಷ್ಣಾ! ಹೀಗಾಗಿಹೋಯಿತು. ಭೀಮನು ಹಣ್ಣು ತಂದುಬಿಟ್ಟನು.

ಇನ್ನೇನು ಗತಿ" ಎಂದು ಅತ್ತನು. ಶ್ರೀಕೃಷ್ಣನು "ಇರಲಿ. ಬಾ" ಎಂದು ಅವರನ್ನೆಲ್ಲಾ ಆ ಮರದ ಬಳಿಗೆ ಕರೆದುಕೊಂಡು ಹೋದನು. ಅಲ್ಲಿ ಪಾಂಡವರನ್ನು ಕುರಿತು "ಅಯ್ಯಾ! ಈ ಹಣ್ಣು ಮೊದಲಿನಂತೆ ತೊಟ್ಟಿಗೆ ಸೇರಿಕೊಳ್ಳಬೇಕಾದರೆ, ನಿಮ್ಮ ನಿಮ್ಮ ಮನಸ್ಸಿನಲ್ಲಿರುವುದನ್ನು ಮುಚ್ಚು ಮರೆಯಿಲ್ಲದೆ ಹೇಳಬೇಕು. ನೀವು ಹಾಗೆ ದಿಟ ಹೇಳಿದರೆ, ಅದು ತಾನೇ ಹೋಗಿ ತೊಟ್ಟಿಗೆ ಸೇರಿಕೊಳ್ಳುತ್ತದೆ. ಸುಳ್ಳು ಹೇಳಿದರೆ ಬಿದ್ದುಹೋಗುತ್ತದೆ" ಎಂದನು.

ಎಲ್ಲರೂ "ಹಾಗೆ ಆಗಲಿ" ಎಂದರು. ಧರ್ಮರಾಯನು ತನ್ನ ಮನಸ್ಸಿನಲ್ಲಿದ್ದುದನ್ನು ಹೇಳಿದನು. ಹಣ್ಣು ಒಂದಾಳು ಎತ್ತರ ಮೇಲಕ್ಕೆ ಹೋಯಿತು. ಭೀಮನು ನಿಜವನ್ನೇ ನುಡಿದನು. ಇನ್ನೂ ಒಂದಾಳು ಎತ್ತರ ಮೇಲಕ್ಕೆ ಹೋಯಿತು. ಅರ್ಜುನನು ಸತ್ಯವನ್ನು ಆಡಿದನು. ಮತ್ತೂ ಒಂದಾಳು ಎತ್ತರ ಹತ್ತಿತು. ನಕುಲ ಸಹದೇವರೂ ನಿಶ್ಚಯವನ್ನೇ ನುಡಿದರು. ದ್ರೌಪದಿಯೂ ತನ್ನ ಮನಸ್ಸಿನಲ್ಲಿ ಇದ್ದುದನ್ನು ಕೊಂಚವೂ ಮುಚ್ಚದೆ ಹೇಳಿದಳು. ಹಣ್ಣು ಹೋಗಿ ತನ್ನ ಎಡೆಯನ್ನು ಸೇರಿತು.

ಪಾಂಡವರು ಬದುಕಿದೆವೆಂದು ಕೃಷ್ಣನನ್ನು ಕೊಂಡಾಡಿದರು. ಕೃಷ್ಣನು "ಅಯ್ಯಾ! ನನ್ನನ್ನು ಏಕೆ ಹೊಗಳುವಿರಿ? ಇದು ನೀವು ಆಡಿದ ದಿಟದ ಮಹಿಮೆ!" ಎಂದು ಹೇಳಿದನು.



ಮದವಣಿಗ

ಚಿತ್ರಕಾರರು :—ಎಸ್. ವಿ. ಎಸ್. ರಾಮರಾವ್‌ಗಾರು, ಚೆನ್ನಪುರಿ (‘ಭಾರತಿ’ಯ ವಿಶ್ವಾಸದಿಂದ)

Printed at Makkala Pustaka Press, Bangalore City.

# ನಾವೆಲ್ಲರು ಒಂದೆ

---

ಮರದಡಿ ಕೊಳದಡಿ ನೆರಳಲಿ ಬಿಸಿಲಲಿ
ಹರಿದಾಡಿ ಹಾರಾಡಿ ಹರಿಸದಿ ಬೆರೆತೆವು

ಎಲೆಗಳು ಪಿಸಪಿಸ ಸುಳಿಗಾಳಿ ಸುಯಿಸುಯಿ
ಎಳೆಬಿಸಿಲ ಕಾದೆವು ಕೊಳಲೂದಿ ಮರೆತೆವು

ಅರ್ಥವಿಲ್ಲದೆ ಆಡಿ ವ್ಯರ್ಥಕಾಲವ ಕಳೆದ
ಅರ್ಥವನರಿಯದ ಬಾಂಧವ್ಯವೆಮ್ಮದು

ಹೆಜ್ಜೆಯ ಜಾಡೊಳು ಹೆಜ್ಜೆಯ ನಿಕ್ಕುವ
ಗೆಜ್ಜೆಯ ಕಾಲಿನ ಅಜ್ಜರು ನಾವೆಲ್ಲ

ಎಳೆನಗು ಕಿಲಕಿಲ ಬಳಬಳ ಕಣ್ಣೀರು
ಕಲಕಲ ಮಾತಿನ್ನು ಗೆಲವು ಸೋಲಲ್ಲಿ

ಎಲ್ಲೆಲ್ಲಿ ಬಾಲರು ಇಲ್ಲೆಲ್ಲ ಕೂಡುತ
ಎಲ್ಲರೊಂದಾದೆವು ಎಲ್ಲ ಸೋದರರು

ಎಲ್ಲಿದ್ದರೂ ನಮ್ಮ ಸೊಲ್ಲೆಲ್ಲಿ ಒಂದೇ
ಅಂದದಾನಂದದ ಚಂದುಳ್ಳ ಬಾಲರ

ಕಸ್ತು

ಎಲ್ಲರು ಒಂದೆ ನಾವೆಲ್ಲರು ಒಂದೆ

ಎಲ್ಲರು ಒಂದೆಂದು ಸಾರೆಂದು ಹೇಳುವ

ಎಲ್ಲರು ಒಂದೇ
ನಾ
ವೆಲ್ಲರು ಒಂದೇ



ಬರಲಿಲ್ಲ. ಓಹೋ! ಏನೋ ಮೈಲಿಗೆಯಾಗಿರಬಹು
ದೆಂದು ನೋಡಲು, ಆತನು ಅರಿಯದಂತೆಯೇ ಆತನ
ಉಡಿಯಲ್ಲಿ ಒಂದು ಚೂರು ಮೈಲಿಗೆ ಬಟ್ಟೆಯಿತ್ತು. ಅರ
ಸನಿಗೆ ಆಗ ಕೊಳದಿಂದ ಕುದುರೆಯು ಬರದೆ ಇರಲು
ಕಾರಣವೇನು ಎಂಬುದು ತಿಳಿಯಿತು. ಮತ್ತೆ ಮಿಂದು
ಮಡಿಯುಟ್ಟು ಪೂಜಿಸಿದನು. ಆದರೂ ಕುದುರೆಯು ಬರ
ಲಿಲ್ಲ. ಒಂದು ಸಲ ಮೈಲಿಗೆ ಸೋಕಿ, ಕೊಳದ ಮಹಿ
ಮೆಯೇ ಹೋಗಿಬಿಟ್ಟಿತು.

ಅಂದಿನ ದಿನವೂ ಯುದ್ಧವಿತ್ತು. ಶೀಲಾದಿತ್ಯನೂ
ಹೋದನು. ಆದರೆ ಆತನಿಗೆ ಅಂದಿನ ಯುದ್ಧವೇ ಕೊನೆ
ಯಾಯಿತು. ಆತನು ಅಂದಿನ ರಣಗಂಗದಿಂದ ಹಿಂದಿರು
ಗಲೇ ಇಲ್ಲ. ಆತನು ಅಲ್ಲಿಯೇ ಮಡಿದುಹೋದನು.

———

# ಮುತ್ತಿನಶೆಟ್ಟಿ



ಕುಟ್ಟಿ ಕೊಕ್ಕ ಮುರಿಮುರಿ
ದಿಟ್ಟುಬಂದೆ ಗೂಡಗೀಡ
ಕಷ್ಟಪಟ್ಟೆ ಬಲುಬಲು
ಇಷ್ಟದಣ್ಣ ನೆಲ್ಲಿ ಎಲ್ಲಿ
ಮುತ್ತಿನ್ಶೆಟ್ಟೀ ತೊರ್ರೆ ತೊರ್ರೆ ತೊರ್ರೆ

ನುಗ್ಗಿದೂರ ಹಾಳುಮಾಡಿ ನುಗ್ಗಿಬಂತು
ಹುಚ್ಚುಹೊಳೆಯು
ಸುಗ್ಗಿಸುಗ್ಗಿ ಯಮನಮನೆಗೆ
ಬಗ್ಗಿನೋಡು ಅಣ್ಣನವನೆ
ಮುತ್ತಿನ್ಶೆಟ್ಟೀ ತೊರ್ರೆ ತೊರ್ರೆ ತೊರ್ರೆ

ಮಾಟಗಾರ್ತಿ ಕೆಡಹಿ ಕುಡಿಸಿ
ನೋಟಬದುಲ ಮಾಡಿಯಿಹಳು

ಮಾಟವಿದನು ದೂರಬಲ್ಲ
ಸೂಟಿಯಿಂದ ಕೂಗಲಣ್ಣ
ಮುತ್ತಿನ್ಶೆಟ್ಟೀ ತೂರ‍್ರೆ ತೂರ‍್ರೆ ತೂರ‍್ರೆ
ಅಣ್ಣ ಅಣ್ಣ ಕೇಳು ಕೇಳು
ಸಣ್ಣಹಳ್ಳ ಹುಚ್ಚುಹಿಡಿದು
ನಿನ್ನಊರ ನುಗ್ಗುತಿಹುದು
ಸಣ್ಣ ತೂರೆಯಿದೇರುತಿಹುದು
ಮುತ್ತಿನ್ಶೆಟ್ಟೀ ತೂರ‍್ರೆ ತೂರ‍್ರೆ
ಅರಸಗಿತ್ತು ಮುತ್ತು ರತುನ
ಪುರದ ಶೆಟ್ಟಿ ಕರೆಯಕಳಿಸೆ
ಮರೆದು ನಿಂದ ಎನ್ನಅಣ್ಣ
ಕರೆದುಕೂಗು ಕಣಿವೆಯಲ್ಲಿ
ಮುತ್ತಿನ್ಶೆಟ್ಟೀ ತೂರ‍್ರೆ ತೂರ‍್ರೆ ತೂರ‍್ರೆ
ಸತ್ತೆನೆನುತ ಮಾಟಗಾರ್ತಿ ಮತ್ತೆಮತ್ತೆ
ಮುಳುಗುತಿಹಳು

ಹತ್ತಿ ಬಂದ ನೀರು ಅವಳ
ಸುತ್ತಿ ಸುಳಿಯೊಳಿಟ್ಟಿತು
ಮುತ್ತಿನ್ನೆಟ್ಟೀ ತೊರ್ರೆ ತೊರ್ರೆ ತೊರ್ರೆ
ತಿರುಗಿ ಬರುತಲಣ್ಣ ಹೆಣ್ಣ
ತರುವನೇನೊ ತನಗೆ ಎನಗೆ
ಹರಿಗೊಲವನು ತೊರೆಯೆ ಹರಿಸೆ
ಅರಿವನೆಂತು ಎನ್ನ ಅಣ್ಣ
ಮುತ್ತಿನ್ನೆಟ್ಟೀ ತೊರ್ರೆ ತೊರ್ರೆ ತೊರ್ರೆ
ಗುಡಿಯ ಗಂಟೆಯುಲುಗ ಗಣಿಕೆ
ಗಿಡದ ಬುಡದಿ ಹೂತಳಾಕೆ
ನುಡಿಯೆ ಗಂಟೆ ನುಡಿವೆ ನಾನು
ತಡೆಯನೆಂತು ತಿಳಿವನಣ್ಣ
ಮುತ್ತಿನ್ನೆಟ್ಟೀ ತೊರ್ರೆ ತೊರ್ರೆ ತೂರ್ರೆ
ಧನಿಯಕೇಳಿ ಬಂದು ನಿಂದು
ಮನವ ತೆರೆದು ನೋಡಿ ಮೂಡಿ

ಅನುಜನೆಂಬ ಭಾಗಗೀವ
ವೆನಗೆ ಶೆರೆಯ ಬಿಡಿಸಬಲ್ಲ
ಮುತ್ತಿನ್ನೈಟ್ಟೇ ತೊರ್‍ರ್‍ರೆ ತೊರ್‍ರ್‍ರೆ ತೊರ್‍ರ್‍ರೇ

ಎಲ್ಲಿ ಎಂದು ತಿರುಗಿ ಬಂದು
ಎಲ್ಲರನ್ನು ಕಾಣದಣ್ಣ
ಚಲ್ಲಿ ಮುತ್ತು ರತ್ನವೆಲ್ಲ
ಎಲ್ಲಿ ಅಸುವ ನೀಗುತಿಹನೊ
ಮುತ್ತಿನ್ನೈಟ್ಟೇ ತೊರ್‍ರ್‍ರೆ ತೊರ್‍ರ್‍ರೆ ತೊರ್‍ರ್‍ರೇ



# ೧೩ ಬಡಗಿಗಳೂ ಆನೆಯೂ

ಕಪಿಲಾನದಿಯ ತೀರದಲ್ಲಿ ಒಂದು ಕಾಡು. ಬಡಗಿಗಳು ಅಲ್ಲಿ ಮರವನ್ನು ಕುಯ್ಯುತ್ತಿದ್ದರು. ಎಲ್ಲರೂ ತಮ್ಮ ತಮ್ಮ ಪಾಡಿಗೆ ತಾವು ತಾವು ಕೆಲಸ ಮಾಡುತ್ತಿದ್ದರು ಆಗ ಆನೆಯು ಘೀಳಿಟ್ಟಂತೆ ಆಗಲು ಎಲ್ಲರಿಗೂ ಹೆದರಿಕೆ ಆಯಿತು. ಮತ್ತೊಂದು ಸಲ ಯಾಗೆಯೋ ಅದೇ ಶಬ್ದ ಕೇಳಿಸಿತು ಎಲ್ಲಿಯವರು ಅಲ್ಲಲ್ಲೇ ಅಡಗಿಕೊಂಡು ಬಿಟ್ಟರು.

ಒಂದು ದೊಡ್ಡ ಕೊಂಬಿನಾನೆ ಕುಂಟುತ್ತಾ ಬಂತು ಅದಕ್ಕೆ ಬಲಗಡೆಯ ಮುಂಗಾಲು ಮುಂದಕ್ಕೆ ಇಡುವುದಕ್ಕೂ ಆಗದಷ್ಟು ಗಾತ್ರ ಬಾತುಕೊಂಡಿತ್ತು. ಬಲು ಕಷ್ಟದಿಂದ ಆನೆಯು ಆ ಬಡಗಿಗಳು ಇರುವ ತಾವಿಗೆ ಬಂತು. ಇನ್ನು ಮುಂದೆ ಹೋಗಲಾರದೆ ಮಲಗಿಕೊಂಡು ಬಿಟ್ಟಿತು. ಅದು ನೋವಿನಿಂದ ನರಳುತ್ತಿತ್ತು.

ಆನೆಯು ಬಾಧೆ ಪಡುತ್ತಿರುವುದು ಬಡಗಿಗಳಿಗೆ ತಿಳಿಯಿತು. ಮನಸ್ಸು ನಿಲ್ಲದೆ ಆದುದು ಆಗಲಿ ಎಂದು



ಬಡಗಿಗಳೂ ಆನೆಯೂ

ಅವಿತಿದ್ದವನು ಆನೆಯ ಬಳಿಗೆ ಹೋದನು. ಅವನು ಹತ್ತಿರ ಬಂದರೂ ಆನೆಯೂ ಏನೂ ಮಾಡಲಿಲ್ಲ. ಅವನಿಗೆ ಧೈರ್ಯವಾಗಿ, ಇನ್ನೂ ಹತ್ತಿರಕ್ಕೆ ಹೋದನು. ಆನೆಯು ಅವನ ಮುಖವನ್ನು ನೋಡಿ, ಕಣ್ಣೀರು ಬಿಟ್ಟಿತು ಅದನ್ನು ನೋಡಿದರೆ "ನೀನು ಬಂದು ಏನಾಗಿದೆ ನೋಡು" ಎಂದು ಹೇಳುವ ಹಾಗೆ ತೋರಿತು. ಅದೂ ಒಂದು ಸಲ ನರಳಿತು. ಇನ್ನು ಸ್ಪರ್ಶಿಸುವುದು ಅಸಾಧ್ಯವಾಗಿ, ಊದಿದ ಕಾಲಿನ ಬಳಿಗೆ ಹೋದನು. ಎಡಗೈಯಲ್ಲಿ ಜೀವವನ್ನು ಹಿಡಿದುಕೊಂಡು, ಆ ಕಾಲನ್ನು ಹಿಡಿದು ನೋಡಿದರೆ, ಸುಮಾರು ಒಂದು ಗೇಣುದ್ದ, ಒಂದು ಹೆಬ್ಬೆರಳು ದಪ್ಪ ಇರುವ ಸಿಬಿರು ಚುಚ್ಚಿಕೊಂಡಿರುವುದು. ಕಂಡು ಬಂತು ಅದರಿಂದ ಆನೆಗೆ ಎಷ್ಟು ನೋವಾಗಿರಬಹುದೋ ಎಂದು ಅವನಿಗೆ ಕಣ್ಣಿನಲ್ಲಿ ನೀರು ಬಂತು. ಕೂಡಲೇ ತನ್ನವರನ್ನು ಕರೆದು ಬಿಸಿ ನೀರು ಕಾಯಿಸಿ ತರಿಸಿ ಅದನ್ನು ಹಾಕಿ ತೊಳೆದನು. ಆನೆಗೂ ಕೊಂಚ ಹಿತವಾಗಿ, ಒಂದು ನಿಟ್ಟುಸಿರು ಬಿಟ್ಟಿತು. ಹಾಗೇ ಇನ್ನೂ ಸ್ವಲ್ಪ ಬಿಸಿನೀರು ಹಾಕುತ್ತಿದ್ದು ಕೊನೆಗೆ ಆ ಸಿಬರನ್ನು ಕಿತ್ತುಬಿಟ್ಟನು. ಸಿಬಿರು ಈಚೆಗೆ ಬಂದುಬಿಟ್ಟಿತು. ಆ ವೇಳೆಗೆ ಧೈರ್ಯಗೊಂಡು ಎಲ್ಲರೂ

ಅಲ್ಲಿಗೆ ಬಂದರು. ಆ ಗಾಯದಲ್ಲಿದ್ದ ಕೀವು ರಕ್ತಗಳನ್ನು ಚೆನ್ನಾಗಿ ತೊಳೆದು ಅದಕ್ಕೆ ತಮ್ಮಲ್ಲಿದ್ದ ಔಷಧಿಯನ್ನು ಹಾಕಿದರು.

ಆ ಹುಣ್ಣು ಆರುವುದಕ್ಕೆ ಒಂದು ತಿಂಗಳು ಹಿಡಿಯಿತು. ಅದುವರೆಗೂ ಆನೆಯು ಅಲ್ಲಿಯೇ ಇತ್ತು. ಬಡಗಿಗಳೂ ಅದಕ್ಕೆ ಅಲ್ಲಿಗೇ ಸೊಪ್ಪು ತಂದು ಹಾಕುತ್ತಿದ್ದರು. ಜತೆಗೆ 'ಪಾಪ!' ಎಂದು ತಾವು ಒಂದಿಷ್ಟು ಬುತ್ತಿಯನ್ನೂ ಕೊಂಚಕೊಂಚ ಕೊಡುತ್ತಿದ್ದರು. ಆನೆಗೆ ಬಡಗಿಗಳಲ್ಲಿ ಪ್ರೀತಿ ಹುಟ್ಟಿತು. ಆನೆಯು ಅವರನ್ನು ಬಿಟ್ಟು ಹೋಗಲಾರದೆ ಅಲ್ಲಿಯೇ ನಿಂತುಬಿಟ್ಟಿತು. ಅವರುಗಳಿಗೆ [illegible] ಕೆಲಸ ಮಾಡಿಕೊಡುವುದಕ್ಕೆಂದು [illegible] ಮರ ಎಳೆಯುವುದು [illegible] ಮಾಡಿಕೊಡುತ್ತಿತ್ತು. ಬಡಗಿಗಳ ಮಕ್ಕಳು ಯಾವತ್ತಾದರೂ ಬಂದರೆ ಅವರನ್ನು ಬೆನ್ನಿನ ಮೇಲೆ ಕೂಡಿಸಿಕೊಂಡು ಓಡಾಡಿಸುತ್ತಿತ್ತು.

---

# ಕಳೆದ ವರುಷದಿಂದ ಮಕ್ಕಳ ಪುಸ್ತಕವು ಮೂರು ರೂಪಗಳಲ್ಲಿ ಹೊರಡುತ್ತಿದೆ.

ಮೊದಲನೆಯದು—ಪ್ರೈಮರಿ ಎಡಿಷನ್ ೬—೧೨ ವರ್ಷದ ಹುಡುಗ ಹುಡುಗಿಯರಿಗೆ ಚಂದಾ (ರೂ. ೩—೦—೦) ವರ್ಷಕ್ಕೆ

ಎರಡನೆಯದು—ಸೆಕೆಂಡರೀ ಎಡಿಷನ್ ೬ ವರುಷದಿಂದ ೧೨ ವರುಷದವರೆಗೂ ಮತ್ತು ಎಲ್ಲಾ ಮಿಡಲ್ ಮತ್ತು ಹೈಸ್ಕೂಲುಗಳಿಗೆ

ಚಂದಾ ೫—೦—೦ ರೂ.

ಮೂರನೆಯದು—ಸೆಕೆಂಡರೀ ಪುಸ್ತಕವು ಉತ್ತಮವಾದ ಕಾಗದದ ಮೇಲೆ ಮುದ್ರಿತವಾಗಿರುವುದು. ಮತ್ತು ವರ್ಷದ ಕೊನೆಗೆ ನಾನಾ ತರಹ ಚಿತ್ರಗಳಿಂದ ಕೂಡಿದ ಎರಡು ವಿಶೇಷ ಸಂಚಿಕೆಗಳು. ಈ ವಿಶೇಷ ಸಂಚಿಕೆಗಳ ಬೆಲೆ ೫ ರೂ ಈ ಎರಡು ವಿಶೇಷ ಸಂಚಿಕೆಗಳೂ ಮತ್ತು ಮಾಸ ಪತ್ರಿಕೆಯ ಒಂದು ವರ್ಷದ ಚಂದಾ ಕೂಡಿ ೧೦ ರೂ.

## ಮಕ್ಕಳ ಪುಸ್ತಕ, ಕಾರ್ಯಾಲಯ, ಬೆಂಗಳೂರು ನಗರ.

---

# ಮಯೂರ

ಕರ್ನಾಟಕದ ಮೊದಲನೆಯ ಚಕ್ರವರ್ತಿ ಕದಂಬ ಮಯೂರ ವರ್ಮನು ಪಲ್ಲವ ಸಾಮ್ರಾಜರನ್ನು ಎದುರಿಸಿ ರಾಜ್ಯವನ್ನು ಸ್ಥಾಪಿಸಿದ ಕಥೆ

ದೇವುಡು ಬರೆದುದು

ಮೂರು ಭಾಗಗಳೂ ಸೇರಿ

| | |
|---|---|
| ಬೆಲೆ ಸಾಮಾನ್ಯ ಪ್ರತಿ ೧ರೂ. | ೧ ೮ ೦ |
| ಬೆಂಡುಕಾಗದ ಕ್ಯಾಲಿಕೊ ಬೈಂಡು | ೨ ೦ ೦ |

---

ಮುದ್ದುಮಕ್ಕಳ ಸಲುವಾಗಿ ಗಂಡಹೆಂಡಿರ ಸಂವಾದ

**ಹೆಂಡತಿ**:—ಏನಂದ್ರೆ ! ಬಳೇಪೇಟೆಯಲ್ಲಿರುವ

## ಮೈಸೂರು ಓರಿಯಂಟಲ್ ಬ್ಯಾಂಕಿನಲ್ಲಿ

ಮಕ್ಕಳ ಹೆಸರಿನಲ್ಲಿ ತಿಂಗಳಿಗೆ ೧-೨ ರೂ. ಕೊಡಿಡಬಹುದಂತೆ. ಮುಂಜಿ ಮದುವೆ ಹೊತ್ತಿಗೆ ದುಡ್ಡು ಕೊಡುತ್ತಾರಂತೆ. ಈ ನಮ್ಮ ಮಕ್ಕಳ ಹೆಸರಿನಲ್ಲಿ ನೀವೂ ಇಡಬಾರದೇ ?

ಗಂಡ :—ಬರುವ ಸಂಬಳ ಊಟಕ್ಕೆ ಸಾಲದು ಕೂಡಿಡುವುದೆಲ್ಲಿ ಸಾಧ್ಯ ?

ಹೆಂಡತಿ :—ನೀವು ಹೋಟಲಿಗೆ ಹೋಗುವುದು ಸ್ವಲ್ಪ ಕಡಿಮೆಮಾಡಿದರಾಯಿತು.

# WHEN YOU BEAUTIFY YOUR SKIN PROTECT IT TOO




Not only make the skin satin soft but also keeps it well protected, freeing it from all cause of irritation. This is non-greasy and a superb powder base too! Ask your nearest store

They sell !!

Daily use will bring back that youthful glow on your face

*If you find any difficulty in obtaining it please write to:—*

***M/S C. I. B. HOUNSA,***

Manufacturers, Hareey Road, Bombay, 7

*Apply for wholesale rates to:—*

**C I B. Hounsa (Branch)**

**15 VII Cross Road,**

Malleswaram, BANGALORE

**As. 12only**

---




" ಬಾಯಿ ಬಿಟ್ಟರೆ ಬಣ್ಣಗೇಡು "

- ಎಂಬಂತೆ ಆಗಬಾರದು -

ಆದ್ದರಿಂದ ಹಲ್ಲು ಚೊಕ್ಕಟವಾಗಿಟ್ಟುಕೊಳ್ಳಿ, ಹಲ್ಲು ಚೆನ್ನಾಗಿರಬೇಕಾದರೆ ಒಂದೇ ಒಂದು ಸುಖಮಾರ್ಗ

ಅದು

ಸುಖಾನಂದ ಹಲ್ಲುಪುಡಿಯನ್ನು ಉಪಯೋಗಿಸುವುದರಲ್ಲಿ ಇದೆ ಹೌದೋ ಅಲ್ಲವೋ ಆದಷ್ಟು ಜಾಗ್ರತ ಪರೀಕ್ಷಿಸಿ ನೋಡಿ

## ಸುಖಾನಂದ ಟೂತ್ ಪೌಡರ್ ಡಿಪೋ,

ಚಿತ್ರದುರ್ಗ